ಆದರ್ಶ ಶ್ರಾವಕ

# ಪದ್ಮಯ್ಯ ಚರಿತೆ




ಲೇಖಕರು :

ಶ್ರೀ ಡಿ. ಸುಬ್ಬಣ್ಣ ಜೈನ್, ಚಕ್ಕ್ಯಾರು.



ಪ್ರಕಾಶಕರು :

ಎಂ. ಸಿ. ಪದ್ಮರಾಜ್ ಮತ್ತು ಎಂ. ಸಿ. ರವೀಂದ್ರಕುಮಾರ್

ಎಂ. ಪಿ. ಸಿ. ಎಸ್ಟೇಟ್, ಕನ್ನಂಬೆಟ್ಟ, ವೈನಾಡು ಜಿಲ್ಲೆ, ಕೇರಳ.

ADHRSHA SHRAVAKA

# PADMAIAH CHARITHE

1000 Copies

December 1995

Author :

**Sri D. Subbanna Jain, Chakkur**

Publishers :

**Sri M. C. Padmaraj & Sri M. C. Ravindra kumar**

Kunnambetta, Vynad District, Kerala

Printed at :

*Srikanth Printers*

6th Cross, R.P. Road, Nanjangud

Mysore District



ಪರಮಪೂಜ್ಯ ಜಗದ್ಗುರು ಭಾರತಗೌರವ, ಸ್ಯಾದ್ವಾದಕೇಸರಿ
ಸ್ವಸ್ತಿಶ್ರೀ ಶ್ರೀ ಶ್ರೀ

**ಶ್ರೀಮದ್ದೇವೇಂದ್ರಕೀರ್ತಿ ಭಟ್ಟಾರಕ ಪಟ್ಟಾಚಾರ್ಯ**

ಮಹಾಸ್ವಾಮಿಗಳವರು

ಹೊಂಬುಜ ಶ್ರೀ ಜೈನ ಮಠ, ಹೊಂಬುಜ.

# ಶುಭಾಶೀರ್ವಾದಗಳು

॥ ಶ್ರೀ ಪಾರ್ಶ್ವನಾಥಾಯ ನಮಃ ॥

॥ ಶ್ರೀ ಪದ್ಮಾವತಿದೇವಿ ಪ್ರಸನ್ನ ॥

**ಪರಮಪೂಜ್ಯ ಶ್ರೀಮದ್ ಜಗದ್ಗುರು ಭಾರತಗೌರವ, ಸಮ್ಯಕ್ತ್ವಚೂಡಾಮಣಿ**
**ಸ್ಯಾದ್ವಾದಕೇಸರಿ ಸ್ವಸ್ತಿಶ್ರೀ ಶ್ರೀ ಶ್ರೀ**

## ಶ್ರೀಮದ್ದೇವೇಂದ್ರಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರು

**ಶ್ರೀ ಹೊಂಬುಜ ಜೈನ ಮಠ, ಹೊಂಬುಜ–೫೭೭೪೩೬**
ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

ವೈನಾಡಿನಲ್ಲಿ ಸುಪ್ರಸಿದ್ಧ ಧರ್ಮಾತ್ಮರಾಗಿದ್ದ ಸ್ವ॥ ಶ್ರೀ ಎಂ. ಎಸ್. ಪದ್ಮಯ್ಯ ಗೌಡರ್ ಅವರ 25ನೇ ವರ್ಷದ ಪುಣ್ಯದಿನಾಚರಣೆ ಸ್ಮರಣಾರ್ಥವಾಗಿ ಅನಂತಕೃಷ್ಣ ಪುರಂನ ಭಗವಾನ್ ಶ್ರೀ 1008 ಅನಂತನಾಥಸ್ವಾಮಿಯ ದಿವ್ಯ ಸನ್ನಿಧಿಯಲ್ಲಿ ವಿಶೇಷ ಪೂಜೆ ಮತ್ತು ಶ್ರದ್ಧಾಂಜಲಿ ಸಭೆಯನ್ನು ಏರ್ಪಡಿಸಿ ಅವರ ಜೀವನ ಚರಿತ್ರೆಯನ್ನು ಆಧರಿಸಿ ಸಂಗೀತ ವಿದ್ವಾನ್ ಶ್ರೀ ಡಿ. ಚಕ್ಕೂರು ಸುಬ್ಬಣ್ಣನವರು ಸಾಂಗತ್ಯದಲ್ಲಿ ಬರೆದಿರುವ **"ಆದರ್ಶಶ್ರಾವಕ ಶ್ರೀ ಪದುಮಯ್ಯ ಚರಿತೆ"** ಎಂಬ ಕೃತಿಯನ್ನು ಪ್ರಕಟಿಸಲು ಉದ್ದೇಶಿಸಿರುವುದು ಸಂತೋಷದ ವಿಚಾರ.

ಸ್ವ॥ ಶ್ರೀ ಎಂ. ಎಸ್. ಪದ್ಮಯ್ಯಗೌಡರು ಇಪ್ಪತ್ತನೇ ಶತಮಾನದ ಜೈನಸಮಾಜ ಕಂಡ ಅತ್ಯಂತ ಮಹಾನ್ ಚೇತನಗಳಲ್ಲಿ ಒಬ್ಬರಾಗಿದ್ದರು. ಆಗರ್ಭ ಶ್ರೀಮಂತ ಮತ್ತು ಗೌರವಾನ್ವಿತ ಮನೆತನದಲ್ಲಿ ಹುಟ್ಟಿದ ಶ್ರೀಯುತರು ತಮ್ಮ ಬದುಕಿನ ಹೆಚ್ಚಿನ ಸಮಯ ವನ್ನು ಧರ್ಮಾಚರಣೆಗಾಗಿ ವ್ಯಯಿಸಿದವರು. ಅವರಿಂದ ಆರ್ಥಿಕ ಸಹಾಯವನ್ನು ಪಡೆದು ವಿದ್ಯಾವಂತರಾದ ಬಡ ವಿದ್ಯಾರ್ಥಿಗಳ ಸಂಖ್ಯೆಯು ಅಪಾರ. ಜೈನ ಧರ್ಮದ ಪ್ರಚಾರಕ್ಕಾಗಿ ತನ್ನ ಸ್ವಂತ ಸಂಪತ್ತು ಶಕ್ತಿಯನ್ನು ನೀರಿನಂತೆ ಖರ್ಚುಮಾಡಿ ಹಳ್ಳಿ ಹಳ್ಳಿಗಳಿಗೂ ಹೋಗಿ ಸಹಸ್ರಾರು ಜನರಿಗೆ ಶ್ರೀವೀತರಾಗ ಪ್ರಣೀತ ಜೈನಧರ್ಮದ ಪರಿಚಯ ಮಾಡಿಸಿ ಅವರ ಜೀವನ ಸುಧಾರಣೆಗೆ ದಾರಿದೀಪದಂತೆ ಮಾರ್ಗದರ್ಶನವನ್ನು ಮಾಡಿದ ಪವಿತ್ರಾತ್ಮರಾಗಿದ್ದರು. ತೀರ್ಥಕ್ಷೇತ್ರಗಳ ಮತ್ತು ಇತರ ಜಿನಮಂದಿರಗಳ ಜೀರ್ಣೋದ್ಧಾರಕ್ಕಾಗಿ, ಶಾಸ್ತ್ರಗ್ರಂಥಗಳ ಪ್ರಕಟಣೆಗಾಗಿ, ವಿದ್ವಾಂಸರ ಪೋಷಣೆಗಾಗಿ, ಜೈನಧರ್ಮದ ಪ್ರಚಾರಕ್ಕಾಗಿ ಅವರು ಮಾಡಿದ ತ್ಯಾಗವನ್ನು ಯಾರೂ ಮರೆಯು-ವಂತಿಲ್ಲ. ಕೂಟಮುಂಡ ಎಸ್ಟೇಟ್‌ನ ಅವರ ಸ್ವಗೃಹದಲ್ಲಿ ಅವರು ಗಾಜಿನಲ್ಲಿ ಮಾಡಿಸಿದ ಶ್ರೀ ಜಿನಮಂದಿರವು ಜೈನರನ್ನು ಮಾತ್ರವಲ್ಲದೆ ಜೈನೇತರರನ್ನು ಆಕರ್ಷಿಸಿ ಅವರಿಗೆ ಏಕಕಾಲದಲ್ಲಿ ಸಹಸ್ರಾರು ಜಿನಬಿಂಬಗಳ ದರ್ಶನ ಮಾಡಿಸುವಲ್ಲಿ ಇಂದಿಗೂ ಯಶಸ್ವಿ-

ಯಾಗಿದೆ. ತನ್ನ ಜೀವಮಾನ ಪರ್ಯಂತ ಧರ್ಮಕ್ಕಾಗಿ ದುಡಿದು, ಪರೋಪಕಾರಿ-ಯಾಗಿ ಬದುಕಿ, ನುಡಿದಂತೆ ನಡೆದು, ಆಚಾರವಂತರಾಗಿ ಬಾಳಿದ ಇವರು ಇಂದಿಗೆ ಇಪ್ಪತ್ತೈದು ವರ್ಷಗಳ ಹಿಂದೆ ಸ್ವರ್ಗಸ್ಥರಾದಾಗ ಜೈನ ಸಮಾಜವು ನಿಜವಾಗಿಯೂ ಅನಾಥವಾಯಿತೆಂಬ ಭಾವನೆ ಎಲ್ಲರಲ್ಲಿ ಉಂಟಾಯಿತು. ಅವರು ಸ್ವರ್ಗಸ್ಥರಾದ 25ನೇ ವರ್ಷದ ಪುಣ್ಯತಿಥಿಯನ್ನು ಆಚರಿಸುವ ಸಂದರ್ಭದಲ್ಲಿ ಆಯೋಜಿಸಿರುವ ಎಲ್ಲ ಧಾರ್ಮಿಕ ಕಾರ್ಯಕ್ರಮಗಳು ಯಶಸ್ವಿಯಾಗಿ ನೆರವೇರಲೆಂದು ಭಗವಾನ್ ಶ್ರೀ ೧೦೦೮ ಪಾರ್ಶ್ವ ನಾಥಸ್ವಾಮಿ ಮತ್ತು ಜಗನ್ಮಾತೆ ಶ್ರೀ ಪದ್ಮಾವತಿ ಅಮ್ಮನವರ ಮಹಾಸನ್ನಿಧಿಯಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

"**ಆದರ್ಶಶ್ರಾವಕ ಶ್ರೀ ಪದುಮಯ್ಯ ಚರಿತೆ**" ಎಂಬ ಈ ಕೃತಿಯಲ್ಲಿ ಸ್ವ|| ಶ್ರೀ ಎಂ. ಎಸ್. ಪದುಮಯ್ಯಗೌಡರ ಜೀವನ ಚರಿತ್ರೆ ಅಡಗಿದೆ. ಅವರ ಬದುಕು ಮತ್ತು ಬದುಕಿನ ಮೌಲ್ಯಗಳನ್ನು ಸಂಗೀತ ವಿದ್ವಾನ್ ಶ್ರೀ ಡಿ. ಚಕ್ಕೂರು ಸುಬ್ಬಣ್ಣನವರು ಸಾಂಗತ್ಯ ಶೈಲಿಯಲ್ಲಿ ಬರೆಯುವಲ್ಲಿ ಯಶಸ್ವಿಯಾಗಿದ್ದಾರೆ. ಶೈಲಿ ಸುಂದರ, ಸರಳವಾಗಿದೆ. ಸಂಗೀತ ವಿದ್ವಾಂಸರೆಂದೇ ಪ್ರಸಿದ್ಧರಾಗಿರುವ ಶ್ರೀ ಡಿ. ಸುಬ್ಬಣ್ಣನವರು ಒಳ್ಳೆ ಲೇಖಕರೂ ಆಗಿರುತ್ತಾರೆ. ಸ್ವ|| ಎಂ. ಎಸ್. ಪದ್ಮಯ್ಯಗೌಡರಿಂದ ಪ್ರಭಾವಿತ-ರಾದವರಲ್ಲಿ ಇವರು ಒಬ್ಬರು. ಶ್ರೀ ಎಂ. ಎಸ್. ಪದ್ಮಯ್ಯಗೌಡರ ಸಹವಾಸದಲ್ಲಿಯೇ ಬಹಳ ಸಮಯವನ್ನು ಕಳೆದ ಇವರು ಸಾಂಗತ್ಯ ಶೈಲಿಯಲ್ಲಿ ಈ ಕೃತಿಯನ್ನು ಬರೆದು-ಕೊಟ್ಟು ಜೈನ ಸಮಾಜಕ್ಕೆ ಹೆಚ್ಚಿನ ಉಪಕಾರ ಮಾಡಿರುತ್ತಾರೆ. ಈ ಕೃತಿ ಮೂಲಕ ಜೈನ ಸಮಾಜದ ಯುವ ಪೀಳಿಗೆಗೆ ಸ್ವ|| ಶ್ರೀ ಎಂ. ಎಸ್. ಪದ್ಮಯ್ಯಗೌಡರ ಪರಿಚಯ-ವಾಗುವುದರಲ್ಲಿ ಸಂಶಯವಿಲ್ಲ. ಸಂಗೀತ ವಿದ್ವಾನ್ ಶ್ರೀ ಡಿ. ಚಕ್ಕೂರು ಸುಬ್ಬಣ್ಣನವರ ಕವಿತಾಶಕ್ತಿ ಇನ್ನೂ ವೃದ್ಧಿಸಲೆಂದು ಶ್ರೀ ವಾಗ್ದೇವಿ ಸನ್ನಿಧಿಯಲ್ಲಿ ಪ್ರಾರ್ಥಿಸುತ್ತೇವೆ.

ಈ ಕೃತಿಯ ಪ್ರಕಟಣೆಗೆ ಕುನ್ನಂಬೆಟ್ಟದ ಶ್ರೀ ಎಂ. ಸಿ. ಪದ್ಮರಾಜ್ ಮತ್ತು ಶ್ರೀ ಎಂ. ಸಿ. ರವೀಂದ್ರಕುಮಾರರು ಸಂಪೂರ್ಣ ಆರ್ಥಿಕ ನೆರವನ್ನು ಕೊಟ್ಟಿರುತ್ತಾರೆ. ಅವರ ಧರ್ಮಶ್ರದ್ಧೆ ಪ್ರಶಂಸನೀಯವಾದುದು. ಅವರಿಗೂ ಅವರ ಕುಟುಂಬ ವರ್ಗದ-ವರಿಗೂ ಸಕಲ ಆಯುರಾರೋಗ್ಯ, ಅಭಿವೃದ್ಧಿಗಳು ಪ್ರಾಪ್ತವಾಗಲೆಂದು ಭಗವಾನ್ ಶ್ರೀ ಪಾರ್ಶ್ವನಾಥಸ್ವಾಮಿ ಮತ್ತು ಶ್ರೀ ಮಹಾತಾಯಿ ಸನ್ನಿಧಿಯಲ್ಲಿ ಪ್ರಾರ್ಥಿಸುತ್ತೇವೆ.

|| ಭದ್ರಂ ಭೂಯಾತ್ || || ವರ್ಧತಾಂ ಜಿನಶಾಸನಂ ||

ಶ್ರೀ ಹೊಂಬುಜ ಜೈನ ಮಠ
ಕರ್ನಾಟಕ-577436

ಪರಮಪೂಜ್ಯ ಶ್ರೀಮದ್ ಜಗದ್ಗುರು
ಸ್ವಸ್ತಿಶ್ರೀ ಶ್ರೀ ಶ್ರೀ ಶ್ರೀಮದ್ದೇವೇಂದ್ರಕೀರ್ತಿ
ಭಟ್ಟಾರಕ ಪಟ್ಟಾಚಾರ್ಯ ಮಹಾಸ್ವಾಮಿಗಳವರು

# ಕೃತಿಕಾರರ ಎರಡು ಮಾತು

"ಪರಿವರ್ತಿನೀ ಸಂಸಾರೇ ಮೃತಃ ಕೋವಾನಜಾಯತೇ । ಸಜಾತೋಯೇನ ಜಾತೇನಯಾತಿ ವಂಶಃ ಸಮುನ್ನತಿಂ" ಭರ್ತೃಹರಿ ನೀತಿಶತಕದಲ್ಲಿ ಹೇಳಿರುವಂತೆ—

ಪರಿವರ್ತನೆಯಿಂದ ಕೂಡಿರುವ ಈ ಸಂಸಾರದಲ್ಲಿ ಯಾರು ಸಾಯುವುದಿಲ್ಲ ? ಯಾರು ಹುಟ್ಟುವುದಿಲ್ಲ ? ಹುಟ್ಟಿದವನು ಸಾಯಲೇ ಬೇಕು, ಸತ್ತವನು ಹುಟ್ಟಲೇ ಬೇಕು. ಆದರೆ ಯಾರ ಹುಟ್ಟಿನಿಂದ ಸಮಾಜಕ್ಕೆ ಉಪಕಾರವಾಗುತ್ತದೆಯೋ ಅವರ ಹುಟ್ಟುವಿಕೆ ಮಾತ್ರ ಸಾರ್ಥಕವಾಗುತ್ತದೆ.

ಈ ದಿಶೆಯಲ್ಲಿ ಸ್ವ॥ ಎಂ. ಎಸ್. ಪದ್ಮಯ್ಯಗೌಡರ ಚರಿತ್ರೆ ತಿಳಿಯಬೇಕು. ಅವರ ನಡವಳಿಕೆ, ನುಡಿಯುವಿಕೆ ಎಲ್ಲವೂ ಇಂದಿನ ಸಮಾಜಕ್ಕೆ ತುಂಬಾ ಅವಶ್ಯಕ.

ಶಾಂತಿ, ಸ್ಥೈರಣೆ, ನೀತಿ, ಶಿಸ್ತು, ಪ್ರಾಮಾಣಿಕತೆಯಿಂದಲೇ ಸದಾಕಾಲವೂ ಕೂಡಿದ್ದ ಸ್ವ॥ ಎಂ. ಎಸ್. ಪದ್ಮಯ್ಯಗೌಡರ ಚರಿತ್ರೆ ಪ್ರಕಟವಾಗಬೇಕು. ಅದನ್ನು ಎಲ್ಲರೂ ಓದಬೇಕು. ಅವರ ಜೊತೆಯಲ್ಲಿ ನೀನು ಓಡಾಡಿದವನು, ಅವರನ್ನು ಹತ್ತಿರ-ದಿಂದ ಬಲ್ಲವನು ಅವರ ಚರಿತ್ರೆಯನ್ನು ನೀನು ಬರೆ. ಶ್ರೀ ಪದ್ಮರಾಜ್ ಸಹೋದರರು ಪ್ರಕಟಿಸುವೆವು ಎಂದಾಗ ತುಂಬಾ ಸಂತೋಷವಾಯಿತು. ಇಷ್ಟಾರ್ಥದಾನಿಯಾದ ಜಿನಶಾಸನದೇವಿ ಪೊಂಬುಜದ ಶ್ರೀ ಪದ್ಮಾವತಿಯನ್ನು ಸ್ತುತಿಸಿ ಪೂಜ್ಯ ಗುರುಗಳ ಶುಭಾಶೀರ್ವಾದದಿಂದ ಈ ಕೃತಿರಚನೆಗಳಿಂದ ಸಫಲವಾಗಿದ್ದೇನೆಂದೇ ನನ್ನ ನಂಬಿಕೆ. ಯಾವುದೇ ಕಾರ್ಯಕ್ಕೂ ಸಹಧರ್ಮಿಣಿಯರ ಅನುಮೋದನೆ ಅತ್ಯಗತ್ಯ. ಶ್ರೀ ಎಂ.ಸಿ. ಪದ್ಮರಾಜ್‌ರವರ ಧರ್ಮಪತ್ನಿ ಶ್ರೀಮತಿ ಶಾಂಭವತಿಯವರು ತುಂಬು ಸಂತೋಷದಿಂದ ಪತಿಯೊಡನೆ ಸಹಕರಿಸಿರುತ್ತಾರೆ.

**ಶ್ರೀಮತಿ ಶಾಂಭವತಿ ಎಂ.ಸಿ. ಪದ್ಮರಾಜ್** : ಇವರು ದಕ್ಷಿಣಕನ್ನಡಜಿಲ್ಲೆಯ ಮೂಡುಬಿದಿರೆ ಹತ್ತಿರದ ಪುತ್ತಿಗೆಕೊಡಪಾಡಿಯ ಶ್ರಾವಕ ಶ್ರಾವಕಿ ಪದ್ಮರಾಜ ಹೆಗ್ಗಡೆ ರಾಜಮತಿಯವರ ಮಗಳು ಏಕಮಾತ್ರ ಪುತ್ರಿ ಇಬ್ಬರು ಗಂಡುಮಕ್ಕಳ ತಾಯಿಯಾದವರು ಸದಾಕಾಲ ಧಾರ್ಮಿಕ ಚಿಂತನೆ, ಸ್ವಾಧ್ಯಾಯ, ಪತಿಯೊಡನೆ ತೀರ್ಥಕ್ಷೇತ್ರಗಳ ದರ್ಶನ, ಇಂತಹ ಧಾರ್ಮಿಕ ಶುಭಕಾರ್ಯಗಳಲ್ಲಿ ನಿರತರಾಗಿರುತ್ತಾರೆ.

**ಶ್ರೀಮತಿ ಶಾಂತಕುಮಾರಿ ರವೀಂದ್ರಕುಮಾರ್** : ಇವರು ದಕ್ಷಿಣಕನ್ನಡ ಜಿಲ್ಲೆಯ ಮೂಡುಬಿದರೆ ಹತ್ತಿರದ ಸಿದ್ದಕಟ್ಟೆ ಶ್ರಾವಕ ಶ್ರಾವಕಿ ಆದಿರಾಜಬಂಗ ರತ್ನಾವತಿಯರ ಮಗಳು. ಇವರೂ ಸಹ ಪತಿಯ ಎಲ್ಲ ಶುಭಕಾರ್ಯಗಳಲ್ಲೂ ಸಹಕಾರವನ್ನು ನೀಡಿ ಉತ್ತಮ ಶ್ರಾವಕಿಯ ಎಲ್ಲಾ ಸದ್ಗುಣಗಳನ್ನು ಹೊಂದಿರುತ್ತಾರೆ. ಎರಡು ಗಂಡು ಮಕ್ಕಳನ್ನು ಹೊಂದಿರುತ್ತಾರೆ. ಶ್ರೀಯುತ ಎಂ. ಸಿ. ಪದ್ಮರಾಜ್ ರವೀಂದ್ರಕುಮಾರ್ ದಂಪತಿಗಳಿಗೆ ಜಿನಶಾಸನದೇವತೆಗಳು ಮಂಗಲವನ್ನುಂಟು ಮಾಡಲೆಂದು ಬೇಡುತ್ತೇನೆ.

ಈ ಪುಸ್ತಕ ಬರೆಯಲು ಪುತ್ತಂಗಡಿಯ ಎಂ. ಸಿ. ಅಜಿತಕುಮಾರ್‌ರವರು, ಮೈಸೂರಿನ ಎಂ. ಸಿ. ಪದ್ಮನಾಭ ಶಾಸ್ತ್ರಿಗಳು, ಶ್ರೀ ವಿಜಯಕುಮಾರ್ ಪಂಡಿತ್‌ರವರಿಗೂ ನಮಿಸಿ ಪದ್ಮಯ್ಯಗೌಡರ ಇಪ್ಪತ್ತೈದನೇ ವಾರ್ಷಿಕ ಪುಣ್ಯದಿನ ಸ್ಮರಣಾಸಮಿತಿ ಮೂವರು ಸದಸ್ಯರಾದ ಶ್ರೀ ಎಲ್. ಜಯಕುಮಾರ್, ಶ್ರೀ ಎಸ್. ನಾಗಕುಮಾರ್, ಶ್ರೀ ಪಿ.ವಿ. ವಿಜಯಕುಮಾರ್ ಇವರುಗಳ ಧರ್ಮಸೇವೆಯನ್ನು ಸ್ಮರಿಸಿ, ಆಶೀರ್ವಚನ ಬರೆದು ಆಶೀರ್ವದಿಸಿದ ಪೊಂಬುಜದ ಜಗದ್ಗುರು ಸ್ವಸ್ತಿಶ್ರೀ ಶ್ರೀಮದ್ದೇವೇಂದ್ರಕೀರ್ತಿ-ಗುರುಗಳ ಪಾದಕ್ಕೆ ನಮಿಸುತ್ತೇನೆ. ವಿದ್ಯುಚ್ಛಕ್ತಿಯ ಅಭಾವದ ಸಮಯದಲ್ಲೂ ಸಹ ತುಂಬಾ ಶ್ರಮವಹಿಸಿ ಸುಂದರವಾಗಿ ಮುದ್ರಿಸಿಕೊಟ್ಟ ಮತ್ತು ನನ್ನ ಬಗ್ಗೆ ಕಿರುಪರಿಚಯ ಬರೆದುಕೊಟ್ಟ ನಂಜನಗೂಡು ಶ್ರೀಕಾಂತ ಮುದ್ರಣದ ಮಾಲೀಕರಾದ ಶ್ರೀ ಜ್ಯೋತಿಷ್ಯವಿದ್ವಾನ್ ಡಿ. ಶ್ರೀಪತಿಜೋಯಿಸ್‌ರವರಿಗೂ ಕೃತಜ್ಞನಾಗಿರುತ್ತೇನೆ.

ಇಂತಿ ಸಜ್ಜನ ವಿಧೇಯ,

**ಸಂಗೀತವಿದ್ವಾನ್ ಡಿ. ಸುಬ್ಬಣ್ಣಜೈನ್**

ಚಕ್ಕೂರು, ಹೆಚ್. ಡಿ. ಕೋಟೆ ತಾಲ್ಲೂಕು

ಮೈಸೂರು ಜಿಲ್ಲೆ

# ಪ್ರಕಾಶಕರ ನುಡಿ

ಕಲಿಕಾಲದ ಸಮವಸರಣದಂತಿದ್ದ ಸ್ವ॥ ಎಂ. ಎಸ್. ಪದ್ಮೇಗೌಡರ ಬಗ್ಗೆ ಬರೆಯಲಿಕ್ಕೆ ತುಂಬಾ ಸಂತೋಷವಾಗುತ್ತದೆ. ನೂರಾರು ಎಕರೆ ತೋಟವನ್ನು ಹೊಂದಿ ಲಕ್ಷಾಧಿಪತಿಯೆನ್ನಿಸಿ ಕೇವಲ ಒಂದು ಖದ್ದರ್ ಬಾಡಿ, ಪಂಚೆ, ಟವಲ್ ಮೈಮೇಲೆ ಹೊದ್ದು ಅಪರಿಗ್ರಹದ ಸಾಕಾರಮೂರ್ತಿ ಎನ್ನುವಂತೆ ಕೈಯಲ್ಲಿ ಕೈಚೀಲವನು ಹಿಡಿದು ಯಾರ ಮನೆಯಲ್ಲಿ ನಾಮಕರಣವಾಗಲಿ, ಗೃಹಪ್ರವೇಶವಾಗಲಿ, ವಿವಾಹದ ಕಾರ್ಯವೇ ಆಗಲಿ, ಉತ್ತರಕ್ರಿಯೆ ಸಂದರ್ಭವೇ ಆಗಲಿ ಅಲ್ಲಿ ಸೇರಿದ ಜನರಿಗೆ ಧರ್ಮೋಪದೇಶ ಮಾಡುವುದೇ ಪದ್ಮಯ್ಯನವರ ಕೆಲಸ. ನಾವೆಲ್ಲರೂ ಅವರಿಂದಲೇ ಧರ್ಮವನ್ನು ಕಂಡು ನಾವಿಂದು ಧರ್ಮದಲ್ಲಿ ನಡೆಯುತ್ತಿದ್ದೇವೆ. ಅವರ ಧಾರ್ಮಿಕ ಉಪಕಾರ ಸ್ಮರಣೆಗೋಸ್ಕರ ಇಪ್ಪತ್ತೈದನೇ ವಾರ್ಷಿಕ ಪುಣ್ಯದಿನದ ಸ್ಮರಣೆಯೆಂದು ಅವರ ಜೀವನ ಚರಿತ್ರೆ ಬರೆಸಿ ಪ್ರಕಟಿಸೋಣವೆಂದು ನನ್ನ ತಮ್ಮ ಶ್ರೀ ರವೀಂದ್ರಕುಮಾರನಿಗೆ ತಿಳಿಸಿದಾಗ ಸಂತೋಷದಿಂದ ಒಪ್ಪಿ ಎಲ್ಲರಿಗೂ ತಿಳಿಯುವಂತೆ ಪದುಮಯ್ಯನವರ ಜೀವನ ಚರಿತ್ರೆಯನ್ನು ಸಾಂಗತ್ಯರೂಪದಲ್ಲಿ ಬರೆದುಕೊಡಬೇಕೆಂದು ಶ್ರೀ ಚಕ್ಕೂರು ಸುಬ್ಬಣ್ಣನವರನ್ನು (ಸಂಗೀತ ವಿದ್ವಾನ್) ಕೇಳಿದಾಗ ಅವರು ಒಪ್ಪಿ ಬರೆದಿರುತ್ತಾರೆ ಪುಸ್ತಕಕ್ಕೆ ಆಶೀರ್ವಚನವನ್ನು ಹೊಂಬುಜ ಮಠದ ಜಗದ್ಗುರು ಸ್ವಸ್ತಿಶ್ರೀ ಶ್ರೀ ಶ್ರೀ ದೇವೇಂದ್ರ ಕೀರ್ತಿ ಗುರುಗಳು ಬರೆದುಕೊಟ್ಟಿದ್ದಾರೆ. ಇವರೆಲ್ಲರಿಗೂ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇವೆ. ಸ್ಮರಣ ಸಮಿತಿಯಲ್ಲಿ ನಮ್ಮೊಡನೆ ಸಹಕರಿಸಿದ ನನ್ನ ತಮ್ಮ ರವೀಂದ್ರಕುಮಾರ್, ಎಲ್. ಜಯಕುಮಾರ್, ಎಸ್. ನಾಗಕುಮಾರ್, ಪಿ. ವಿ. ವಿಜಯಕುಮಾರ್ ಮತ್ತು ಸಹಕರಿಸಿದ ಆತ್ಮೀಯರಿಗೂ ಕೃತಜ್ಞತೆ ಸಲ್ಲಿಸುತ್ತೇನೆ. ಸಕಾಲದಲ್ಲಿ ಈ ಪುಸ್ತಕವನ್ನು ಅಚ್ಚು ಹಾಕಿಕೊಟ್ಟ ನಂಜನಗೂಡಿನ ಶ್ರೀಕಾಂತ ಮುದ್ರಣದ ಮಾಲೀಕರಾದ ಭುವನಹಳ್ಳಿ ಶ್ರೀ ಡಿ. ಶ್ರೀಪತಿಜೋಯಿಸ್‌ರಿಗೂ ನಾನು ಕೃತಜ್ಞನಾಗಿದ್ದೇನೆ. ಅಂತಿಮವಾಗಿ ನನಗೆ ಎಲ್ಲ ರೀತಿಯಲ್ಲೂ ಸಹಕರಿಸಿದ ನನ್ನ ಮಿತ್ರರೆಲ್ಲರಿಗೂ ನಮಿಸುತ್ತೇನೆ.

ಇಂತಿ,

ಜಿನಧರ್ಮಪ್ರೇಮಿ

**ಶ್ರೀ ಎಂ. ಸಿ. ಪದ್ಮರಾಜ್**

ಕುನ್ನಂಬೆಟ್ಟ, ವೈನಾಡು ಜಿಲ್ಲೆ

ಕೇರಳ

|| ಓಂ ||

|| ಶ್ರೀ ಜಿನೇಂದ್ರಾಯ ನಮಃ ||

# ಆದರ್ಶಶ್ರಾವಕ ಪದುಮಯ್ಯ ಚರಿತೆ

## ಮಂಗಲಾಚರಣೆ

ಕೇರಳ ವೈನಾಡು ಕಲ್ಪಟ್ಟ ನಗರದ ಅನಂತಕೃಷ್ಣಪುರದೊಳು ।
ಅನಂತನಾಥನ ಬಸದಿಯೊಳಗಿರ್ಪ ಅನಂತ ಜಿನೇಂದ್ರನ ನಮಿಪೇ || ೧ ||

ವರದೂರು ಗ್ರಾಮದ ನಂತ ಜಿನೇಂದ್ರನ ಶುಭಯೋಗದೊಳು ನಾನು ನಮಿಸಿ ।
ಬೆಣ್ಣಗೋಡು ಶಾಂತಿ ಜಿನೇಂದ್ರನ ವಂದಿಸಿ ಲೋಕಕೆ ಶಾಂತಿ ಕೋರುವೆನು || ೨ ||

ಪುತ್ತಂಗಡಿಯೊಳು ಪದ್ಮಾಸನದೊಳು ಕುಳಿತಿರ್ಪ ಚಂದ್ರ ಜಿನೇಂದ್ರ ।
ಶ್ಯಾಮಯಕ್ಷ ಜ್ವಾಲಾಮಾಲಿನೀದೇವಿಯ ದೇವನ ನಾ ಸ್ತುತಿಸುವೆನು || ೩ ||

ಅತಿಶಯ ಸ್ಥಳವಾದ ಶ್ರೀ ಪಾಲುಗುಂದದ ಪಾರ್ಶ್ವ ಜಿನೇಂದ್ರನ ಸ್ತುತಿಸಿ ।
ಮಾನಂದವಾಡಿಯ ಆದಿ ಜಿನೇಂದ್ರನ ಆನಂದದಿಂ ಪೂಜಿಸುವೆನು || ೪ ||

ಪುದಿಯಾಡ ಶ್ರೀ ಆದಿನಾಥನ ನಮಿಸುತ ಬತ್ತೇರಿಯೊಳಗಿರ್ಪ ಜಿನನ ।
ಶ್ರೀ ಜಿನಾಲಯವನ್ನು ಬಲಗೊಂಡು ಮುದದಿಂದ ದಶಭಕ್ತಿಯಿಂ ಸ್ತುತಿಸುವೆನು || ೫ ||

ಕಲ್ಪಟ್ಟ ನಗರದಿ ಸುಂದರವಾಗಿಹ ಚಂದ್ರನಾಥನ ಬೆಟ್ಟವೇರಿ ।
ನಂಬಿದ ಭಕುತರ ಎಂದೆಂದು ರಕ್ಷಿಪ ಚಂದ್ರನಾಥನ ಸ್ತುತಿಸುವೆನು || ೬ ||

ಪಾಲಕ್ಕಾಡಿನ ಶ್ರೀ ಚಂದ್ರನಾಥನ ಭಕ್ತಿಭಾವದಿ ನಾ ನಮಿಸುತ ।
ಚಂದ್ರಲಾಂಛನನಾದ ಶ್ರೀ ಚಂದ್ರನಾಥನ ಸಂತೋಷದಿಂ ಸ್ತುತಿಸುವೆನು || ೭ ||

ಕೂಟ್ಟಮುಂದರ ಬೆಟ್ಟಮೇಲಿರುವ ಶ್ರೀ ರತ್ನತ್ರಯ ನಿಲಯದೊಳು ।
ಇರುವ ಶ್ರೀ ಪಾರ್ಶ್ವ ಜಿನೇಂದ್ರನ ವಂದಿಸಿ ಬರೆವೆ ಧರ್ಮಾತ್ಮನ ಚರಿತೆ || ೮ ||

## ಜನನ–ಬಾಲ್ಯ–ವಿದ್ಯಾಭ್ಯಾಸ–ಮತ್ತು ಮಕ್ಕಳು

ಸಾವಿರದೊಂಬೈನೂರನೇ ಇಸವಿಯೊಳ್ । ಮಣಿಯಂಗೂಡಿನೊಳುನೀವ್ ಜನಿಸಿ ।
ಮಣಿರತ್ನತ್ರಯ ಧರ್ಮವ ಪೇಳುವ ಧರ್ಮಾತ್ಮ ಪದುಮಯ್ಯರೆನಿಸಿ || ೯ ||

ಸುಬ್ಬೇಗೌಡರ ಧರ್ಮಪತ್ನಿ ಶ್ರೀಮತಿ ಗುಣಾವತಿದೇವಿಯವರ ।
ಗರ್ಭದಿಜನಿಸಿ ನೀವ್ ಧರ್ಮತೀರ್ಥದಿ ಮಿಂದು । ಧರ್ಮತೀರ್ಥವ ಕುಡಿಸಿದಿರಿ ॥ ೧೦ ॥

ಮಣಿಯಂಗೂಡ್ ಸುಬ್ಬಯ್ಯಗೌಡರೆಂದರೆ ಧರ್ಮರಾಯನ ಪ್ರತೀಕದಂತೆ ।
ಎಷ್ಟೇ ಕಷ್ಟವು ಬಂದರು ಧರ್ಮರಾಯನು । ಧರ್ಮವ ಬಿಡಲಿಲ್ಲವಂತೆ ॥ ೧೧ ॥

ದುಃಖದಾರಿದ್ರವು ಪಾಪದ ಫಲವೆಂದು । ಮನದೊಳು ದೃಢದಿ ನಿಶ್ಚ್ಯಸಿ ।
ಸುಬ್ಬೇಗೌಡರು ಧರ್ಮವ ಬಿಡದೇ । ಧರ್ಮಕಾರ್ಯವ ಗೈಯ್ಯುತಿರ್ದರ್ ॥ ೧೨ ॥

ಶ್ರೀಮತಿ ಗುಣಾವತಿಯಮ್ಮನವರ ಮತ್ತೊಂ । ದೆಸರೇ ಅಂಕಿಯಮ್ಮ ।
ಅಂಕಿಯಮ್ಮನೆಂದರೆ ಆದಿಜಿನೇಂದ್ರನ । ಪರ್ಯಾಯ ನಾಮವರಿಯಿರಿ ॥ ೧೩ ॥

ಗಣಿತದ ಕಲೆಯನು ಹೇಳಿಕೊಟ್ಟುದರಿಂದ । ಆದಿನಾಥನೆ ಅಂಕನಾಥ ।
ವೃಷಭನಾಥ ಅಂಕಿನಾಥ ಬೇರೆಯಲ್ಲ । ಸಂಶಯವಿಲ್ಲದೆ ನಂಬಿ ॥ ೧೪ ॥

ಆದಿನಾಥ ಅಂಕಿನಾಥ ಬೇರೆಯಲ್ಲ । ವೆಸುವರು ಗ್ರಾಮೀಣ ಜನರು ।
ಅಂಕಿನಾಥನ ನಾಮದೊಳು ಆದಿನಾಥನ । ನಿತ್ಯವು ನೆನೆಯುತಲಿಹರು ॥ ೧೫ ॥

ಆದಿನಾಥನ ಭಕ್ತೆ ಅಂಕೈಮ್ಮನವರು ತಾವ್ । ಅದಿನಾಥನ ಧರ್ಮವ ನಂಬಿ ।
ವ್ರತಪೂಜಾಜಪಧ್ಯಾನನೋಂಪಿಗಳಿಂದಲಿ । ದೇಹವ ಸವೆಸುತಲಿರ್ದರ್ ॥ ೧೬ ॥

ಧರ್ಮವ ನಂಬಿದ ಸುಬ್ಬಯ್ಯಗೌಡರು । ಪುಲಿಯಾರು ಮಲೆಯ ಸ್ಥಳದೊಳು ।
ಅನಂತನಾಥನ ಭವ್ಯ ಜಿನಾಲಯ । ಕಟ್ಟಿಸಿದರು ಭಕ್ತಿಯಿಂದ ॥ ೧೭ ॥

ಹಳೆಯ ಕಲ್ಪಾವತಿಯೆಂದೆಂಬ ಸ್ಥಳದಿಂದ । ಜಿನಮಂದಿರವ ಪುಲಿಯಾರ್ಮಲೆಗೆ ।
ತಂದು ನೂತನವಾಗಿ ನಿರ್ಮಿಸಿ ಶ್ರೀ ಪಂಚ । ಕಲ್ಯಾಣವನು ಮಾಡಿಸಿದರು ॥ ೧೮ ॥

ಕೃಷ್ಣೇಗೌಡರ ಹಿರಿಯ ಪುತ್ರರಾಗಿ । ಶ್ರೀ ಸುಬ್ಬೇಗೌಡರು ತಾವು ।
ತಂದೆಯ ಹೆಸರಿಗೆ ಕೀರ್ತಿಯ ತಂದರು । ಋಣ ಭಾರವನು ತೀರಿಸಿದರು ॥ ೧೯ ॥

ಇಂಥ ಮಹೋನ್ನತ ಧರ್ಮ ದಂಪತಿಗಳ । ಪುತ್ರರಾಗಿ ಜನಿಸಿದರು ।
ಪದುಮಯ್ಯಗೌಡರು ತಂದೆಯಂತೆ ಜಿನ । ಧರ್ಮವ ಕಾಪಾಡಿದರು ॥ ೨೦ ॥

ಬಾಲಕ ಬೆಳೆಯುತ ಧರ್ಮವ ಕಲಿಯುತ । ಜಿನನೊಳು ಭಕ್ತಿ ತೋರಿಸುತಾ ।
ಮಿತ್ರರ ಜಿನಧರ್ಮ ಮಾರ್ಗದಿ ಬೆಳೆಸುತಾ । ಧರ್ಮವ ಪಾಲಿಸುತಿರ್ದರ್ ॥ ೨೧ ॥

ಸುಬ್ಬೇಗೌಡರ ಸಹೋದರ ಶ್ರೀ । ಮಣಿಯಂಗೂಡನಂತೇಗೌಡರ್ ।
ಕೃಷ್ಣೇಗೌಡರ ಮೂರನೇ ಪುತ್ರರು। ಧರ್ಮಾನುರಾಗಿಗಳಿಹರು ॥ ೨೨ ॥

ಸಾಮಾನ್ಯಸಮಾನ ವಯಸ್ಕರಾದ ಶ್ರೀ। ಪದುಮಯ್ಯನಂತೇಗೌಡರುಗಳ್ ।
ದೇಹ ಬೇರೆಯಾತ್ಮವೊಂದೆಂಬ ತೆರದೊಳು । ಸಂತೋಷದಿಂ ಬಾಳುತಿರ್ದರ್ ॥ ೨೩ ॥

ವೈನಾಡಿನೊಳು ಬಾಲ್ಯ ವಿದ್ಯಾಭ್ಯಾಸವಗ್ಗೈಯ್ದು । ಮೈಸೂರಿನೊಳು ವಿದ್ಯೆಕಲಿಯಲ್ ।
ಶ್ರೀ ನೇಮಿಸಾಗರವರ್ಣೀಜಿಯವರ । ಧರ್ಮಸಂಬಂಧ ಬೆಳೆಸಿದರ್ ॥ ೨೪ ॥

ಶ್ರೀ ನೇಮಿಸಾಗರವರ್ಣೀಜಿಯವರ। ಸದ್ಧರ್ಮ ಸಂಪರ್ಕದಿಂದ ।
ಧರ್ಮಪ್ರೇರಿತರಾಗಿ ಪಾಪಭೀರುಗಳಾಗಿ । ಧರ್ಮಾತ್ಮರಾಗಿ ಬಾಳಿದರು ॥ ೨೫ ॥

ಯಾವುದೇ ಪ್ರಶ್ನೆಯು ಬಂದರು ಶ್ರೀ ನೇಮಿ । ಸಾಗರ ವರ್ಣೀಜಿಯವರೋಳ್ ।
ಆಗಾಗ ಬಂದು ಸಮಸ್ಯೆ ನಿವಾರಿಸಿ । ಧರ್ಮದ ಮರ್ಮವ ತಿಳಿದರ್ ॥ ೨೬ ॥

ಧರ್ಮದ ಪ್ರೀತಿಯಿಂ ಪದುಮಯ್ಯಗೌಡರು । ರಾತ್ರಿ ಹಗಲು ತಾವು ಕುಳಿತು ।
ಧರ್ಮಧ್ಯಾನವ ಮಾಡಿ ಧರ್ಮವ ಚಿಂತಿಸಿ । ಕರ್ಮಕೆ ತಾವಂಜುತಿರ್ದರ್ ॥ ೨೭ ॥

ಮಂಗಳೂರು ಜೈನ ವಿದ್ಯಾರ್ಥಿನಿಲಯದಿ । ವಿದ್ಯಾರ್ಥಿಧ್ವಯರಾಗಿ ನಿಂದು ।
ಎರಡು ವರುಷ ಶಾಲಾ ವಿದ್ಯೆಯ ಕಲಿತು । ಸಂತೋಷದಿಂಹಿಂದಿರುಗಿದರು ॥ ೨೮ ॥

ವಿದ್ಯಾಭ್ಯಾಸವ ಗೈಯುವಕಾಲದಿ । ಕಾರ್ಕಳದ ಪದ್ಮರಾಜ ।
ವಕೀಲರ ಸ್ನೇಹದಿ ಧಾರ್ಮಿಕ ಮೈತ್ರಿಯಿಂ । ಧಾರ್ಮಿಕರಾಗಿ ಬಾಳಿದರು ॥ ೨೯ ॥

ಕೆ. ಬಿ. ಜಿನರಾಜ ಹೆಗ್ಗಡೆಯವರಂಥ । ಶ್ರೀ ಮಹಾಮೇಧಾವಿಗಳೊಡನೆ ।
ಪಾಠ ಪುಸ್ತಕವೋದಿ ಸ್ನೇಹಿತರಾದರು । ಪದುಮಯ್ಯನಂತೇಗೌಡರ್ ॥ ೩೦ ॥

ಎಂ. ಕೆ. ದೇವರಾಜರ ಜತೆಯಲಿ ನಿಂತು । ಸಂತೋಷದಿಂ ವಿದ್ಯೆ ಕಲಿತು ।
ಉತ್ತಮ ವಿದ್ಯಾರ್ಥಿಗಳ ಸುಸ್ನೇಹದಿ । ಉತ್ತಮ ಮಾರ್ಗವರಿತರು ॥ ೩೧ ॥

ಮೈಸೂರಿನಾಸ್ಥಾನ ವಿದ್ವಾಂಸರಾದ ಶ್ರೀ । ಎತ್ತೂರು ಶಾಂತಿರಾಜ ।
ಶಾಸ್ತ್ರಿಗಳ ಸ್ನೇಹದಿ ಪದ್ಮೇಗೌಡರು । ಧರ್ಮತತ್ವವನು ತಿಳಿದರು ॥ ೩೨ ॥

ವಿಧವಿಧದಿಂದಲಿ ಧರ್ಮದ ಚರ್ಚೆಯ । ನಯನಯವಾಗಿ ಮಾಡುತಲೀ ।
ಶಾಸ್ತ್ರವನೋದದೇ ಪದವಿಸ್ವೀಕರಿಸಿದೆ । ಪದುಮಯ್ಯ ತತ್ವವರಿತರ್ ॥ ೩೩ ॥

ಕರ್ಮರಹಸ್ಯವ ಚೆನ್ನಾಗಿ ತಿಳಿಯುತ। ಶುಭ ಕರ್ಮವನು ಸಂಪಾದಿಸುವ ।
ಕಲೆಯನು ಚೆನ್ನಾಗಿ ತಿಳಿದಿರ್ದರ್ ಪದುಮಯ್ಯ। ಗೌಡರು ದಿನಚರ್ಚೆಯಿಂದ ॥ ೩೪ ॥

ಆರನೇ ತರಗತಿ ಮುಗಿಸಿದ ಪದುಮಯ್ಯ । ಗೌಡರ್ಗೆ ವಿವಾಹಗೈಯ್ಯಲ್ ।
ತಂದೆ ಸುಬ್ಬೇಗೌಡರು ನಿಶ್ಚಯಿಸಿದರು । ಸಂಸಾರಭಾರ ಹೊರಿಸಲು ॥ ೩೫ ॥

ತಿರುನೆಲ್ಲಿ ವೆಳ್ಳಪ್ಪಗೌಡರಮಗಳು ಶ್ರೀ । ಸತ್ಯಭಾಮಾದೇವಿಯೊಡನೆ ।
ಸಂತೋಷದಿಂದಲಿ ಮದುವೆಯ ಮಾಡಿದರ್। ಧರ್ಮಾತ್ಮ ಸುಬ್ಬಯ್ಯಗೌಡರ್ ॥೩೬॥

ಸಾವಿರದೊಂಬೈನೂರಯಿಪ್ಪತ್ತು ನಾಲ್ಕನೇ ಯಿಸವಿಯೊಳ್ ।
ಪದುಮಯ್ಯಗೌಡರು ಗೃಹಸ್ಥಧರ್ಮವ ಸಂತೋಷದಿಂ ಸ್ವೀಕರಿಸಿದರ್ ॥ ೩೭ ॥

ಮದುವೆಯ ತರುವಾಯ ಪದುಮಯ್ಯಗೌಡರು । ಕೊಟ್ಟಮಂಡಕೆ ತಾವು ಬಂದು ।
ತಂದೆತಾಯಿಯರ ಸೇವೆಯನು ತಾವ್‌ಗೈಯುತ। ಕೃಷಿಕಾರ್ಯವನು ಗೈಯ್ಯುತಿರ್ದರ್
॥ ೩೮ ॥

ಕೃಷಿಕಾರ್ಯವನು ಗೈಯುತಿರ್ದರು ಪದುಮಯ್ಯ। ಖುಷಿಯಂತೆ ಬಾಳುತಲಿರ್ದರ್ ।
ಖುಷಿಯಂತೆ ಸಾಮಾಯಿಕ ಜಪಧ್ಯಾನದಿಂ । ಹಸನಾಗಿ ಬಾಳುತಲಿರ್ದರ್ ॥ ೩೯ ॥

ವಿವಾಹವಾಗಿ ಬಹುಕಾಲ ಕಳೆಯುಲು । ಪುತ್ರಸಂತತಿಯಿಲ್ಲದಕೆ ।
ಮತ್ತೊಂದು ಮದುವೆಯ ಮಾಡಲು ಸುಬ್ಬಯ್ಯ ಗೌಡರು ನಿಶ್ಚಯಿಸಿದರು ॥೪೦॥

ಪಾಡಿಕ್ಕೆರೆ ಶ್ರೀ ಮಂದಪ್ಪಗೌಡರ । ಪುತ್ರಿಶ್ರೀ ಜಯಮತಿದೇವಿ ।
ಶ್ರೀ ರತ್ನತ್ರಯ ಶೋಭಿತೆ ಜಿನಭಕ್ತೆ । ಜಯಮತಿ ನಾಮಾಂಕಿತೆಯ ॥ ೪೧ ॥

ತಂದು ವಿವಾಹವಗೈದರು ತಂದೆ। ತಾಯಿಗಳು ಸಂಭ್ರಮದಿಂದ ।
ಹಾಡಿಹರಸಿದರು ಮುತ್ತೈದೆರೆಲ್ಲರು। ಸೌಭಾಗ್ಯವತಿಯಾಗೆಂದು ॥ ೪೨ ॥

ಸಾವಿರದೊಂಬೈನೂರ ಮೂವತ್ತೆರಡನೇ। ಇಸವಿ ವರ್ಷದೊಳು ।
ಜಯಮತಿಯಮ್ಮನ ಶುಭ ವಿವಾಹವಗೈದು । ಪದುಮಯ್ಯನವರು ಶೋಭಿಸಿದರ್
॥ ೪೩ ॥

ಕ್ರಮವಾಗಿ ಜಯಮತಿಯಮ್ಮನವರು ಐದು । ಮಕ್ಕಳ ತಾವು ಪಡೆದರು ।
ಧರ್ಮಾತ್ಮ ಪುತ್ರಪುತ್ರಿಯರನು ಪಡೆದು। ಪದುಮಯ್ಯನವರು ಶೋಭಿಸಿದರ್ ॥೪೪॥

ಶ್ರೀಮತಿ ಸತ್ಯಭಾಮಾದೇವಿಶಾಂತಿವರ್ಮರೆಂಬ ಸುತನನು ಪಡೆದರ್ ।
ಏಕಪುತ್ರನ ತಾಯಿ ಎನ್ನಿಸಿದರು ಧರ್ಮಾತ್ಮ ಪುತ್ರನ ತಾವು ಪೆತ್ತು ॥ ೪೫ ॥

ಜಯಮತಿಯಮ್ಮನವರ ಪ್ರಥಮ ಪುತ್ರ ಧರ್ಮಪಾಲರೆಂಬುವರು ।
ಜಿನಧರ್ಮಪಾಲನೆಗೈಯ್ಯುತ ನಿತ್ಯವು। ದಾನಧರ್ಮದಿ ಬಾಳುತಿಹರು ॥ ೪೬ ॥

ದ್ವಿತೀಯ ಪುತ್ರಿ ಶ್ರೀ ಗುಣಮಾಲಾದೇವಿಯು । ಸರ್ವಸದ್ಗುಣವಂತೆಯಾಗಿ ।
ಸಮ್ಯಕ್‌ಧರ್ಮದಿ ನಿತ್ಯ ತಾವ್ ನಡೆಯುತ। ಗುಣನಿಧಿಯಾಗಿ ಶೋಭಿಪರು ॥ ೪೭ ॥

ತೃತೀಯ ಪುತ್ರಿ ಶ್ರೀ ಮರುದೇವಿಯಮ್ಮಳು ಧೀರೆ ಗಂಭೀರೆ ತಾನೆನಿಸಿ ।
ಸ್ಯಾದ್ವಾದ ಧರ್ಮದ ಚಿಂತನೆಗೈಯ್ಯುತ ನಿತ್ಯವು ತಾವ್ ಬಾಳುತಿಹರು ॥ ೪೮ ॥

ಪಂಚಮ ಪುತ್ರಿ ಶ್ರೀ ಶಾಂತಕುಮಾರಿಯು ಪಂಚಗುರುಭಕ್ತೆಯೆನಿಸಿ ।
ಪಂಚಪರಮೇಷ್ಠಿ ಪೂಜೆಯ ಮಾಡುತ ಸಂತೋಷದಿಂ ಬಾಳುತಿಹರು ॥ ೪೯ ॥

ಜಯಮತಿಯಮ್ಮನ ಚತುರ್ಥ ಪುತ್ರಿ ಶ್ರೀ ಸುಲೋಚನಾದೇವಿಯೆನಿಸಿ ।
ಅಲ್ಪ ವಯಸ್ಸಿನೋಳ್ ಬಾಲ್ಯ ಕಾಲದೊಳು । ಬಾಲಮರಣವನಪ್ಪಿದಳು ॥ ೫೦ ॥

ಪಾಪದುದಯದಿಂದ ಧರ್ಮ ಸಂತತಿಯೊಳು । ಪಾಪ ಪುಣ್ಯ ಮಿಶ್ರ ಫಲದಿಂ ।
ಜನಿಸುವರು ಸುಖದಿಂದಲಿ ಬಾಳ್ವರು । ದುಃಖದ ಫಲವನುಣ್ಣುವರು ॥ ೫೧ ॥

ಅವರವರ್ಮಾಡಿದ ಪಾಪಪುಣ್ಯದ ಫಲ। ಅವರೇ ತಾವನುಭವಿಸಬೇಕು ।
ಎನುವ ತತ್ವದ ಮಾತು ಎಂದೆಂದು ಸತ್ಯವು। ಅನುಮಾನವಿಲ್ಲದೆ ನಂಬಿ ॥ ೫೨ ॥

ಧರ್ಮದಿಂ ಬಾಳುವ ಪದುಮಯ್ಯಗೌಡರ್ಗ್ಗ । ದುಃಖದ ಸಂತಾನವಾಯ್ತು ।
ಸುಲೋಚನಾದೇವಿ ನಾಮದಿಂ ಬೆಳೆಯಿತು । ಕರ್ಮ ಫಲವನನುಭವಿಸಿತು ॥ ೫೩ ॥

ಮಗುವಾಗಲಿ ದೊಡ್ಡವನಾಗಲಿ ತಿಳಿದವನಾಗಲಿ ದಡ್ಡನಾಗಲ್ ।
ಜಿನರು ತಿಳಿಸಿದಂತೆ ಕರ್ಮವು ಫಲಿಪುದು । ಸಮಯಾಸಮಯವೆನ್ನಿಸದೆ ॥ ೫೪ ॥

ಜಾರಿಬಿದ್ದಿತು ಮಗು ಎತ್ತರದಿಂದಲಿ । ಮೆದುಳಿಗೆ ಆಘಾತವಾಯ್ತು ।
ಜ್ಞಾನವು ಬರಲಿಲ್ಲ ಕೈಕಾಲು ಸ್ವಾಧೀನ। ಕಳೆಯಿತು ದುಷ್ಕರ್ಮದಿಂದ ॥ ೫೫ ॥

ಒಂಭತ್ತು ವರುಷದ ಕಾಲ ಪರ್ಯಂತರ। ಮಗು ಜೀವಿಸಿತು ಸುಖದಿಂದ ।
ಕ್ಷೇಮ ಚಿಂತೆನೆಗೈಯ್ವ ಜನರಿದ್ದರು ತಾನು। ಕರ್ಮ ಫಲವನನುಭವಿಸಿತು ॥ ೫೬ ॥

ಪಾಪಪುಣ್ಯ ಸಂಕ್ರಮಣದ ಫಲದಿಂದ। ಜನಿಸಿ ಸುಲೋಚನಾದೇವಿ।
ದೇಹವನಳಿಯಿತು ಕರ್ಮವ ಕಳೆಯಿತು। ಧರ್ಮಾತ್ಮ ಪುತ್ರಿಯೆನಿಸಿತು ॥ ೫೭ ॥

ಐದು ಮಕ್ಕಳ ಹೊಂದಿ ಪದುಮಯ್ಯಗೌಡರು। ಐದು ಮಕ್ಕಳ ಜತೆಗೂಡಿ।
ಶ್ರೀ ಪಂಚ ಪರಮೇಷ್ಠಿಗಳ ನಿತ್ಯ ಸ್ಮರಿಸುತ। ಹರುಷದಿಂ ಬಾಳುತಲಿದ್ದರು ॥ ೫೮ ॥

ಧರ್ಮ ಪ್ರೇರಿತರಾಗಿ ಧರ್ಮ ಪಾಲಕರಾಗಿ। ಧರ್ಮದಿಂ ಶೋಭಿತರಾಗಿ।
ದಾನಧರ್ಮಗಳಿಂದಲಾರುಕ್ರಿಯೆಗಳಿಂದ। ಧರ್ಮಪಾಲರು ಬಾಳುತಿಹರು ॥ ೫೯ ॥

ದಕ್ಷಿಣಕನ್ನಡ ಬೆಳ್ತಂಗಡಿ ತಾಲ್ಲೂಕಿನ ಪೆರ್ಲ ಗ್ರಾಮದೊಳು।
ಯುವರಾಜ ಅಜ್ರಿಯವರ ಮಗಳು ಶ್ರೀ। ರತ್ನಮ್ಮನಾಮ ಶೋಭಿತೆಯು ॥ ೬೦ ॥

ಧರ್ಮಪಾಲರನ್ನು ವಿವಾಹವಗೈದು। ಧರ್ಮದಿಂ ಬಾಳುತಲಿಹರು।
ಅತಿಥಿಗಳಿಗೆ ಅನ್ನದಾನವಗೈಯ್ಯುತ। ಭಕುತಿಯಿಂ ಬಾಳುತಲಿಹರ್ ॥ ೬೧ ॥

ಗೃಹಿಣಿಯ ಧರ್ಮವ ಶ್ರೀಮತಿ ರತ್ನಮ್ಮ। ನವರಲಿ ಕಲಿಯಲುಬೇಕು।
ಜಿನಪೂಜೆ ಪರೋಪಕಾರದ ಸೇವೆಯ। ರತ್ನಮ್ಮರಲಿ ನೋಡಬೇಕು ॥ ೬೨ ॥

ಕರ್ನಾಟಕ ರಾಜ್ಯದ ಚಿತ್ರದುರ್ಗ ಜಿಲ್ಲೆ। ಹೊಳಲುಕೆರೆ ನಗರದೊಳು।
ಇರುವ ಶ್ರೀ ಶ್ರೀಪಾಲಶೆಟ್ಟರ ಮಗನಾದ। ಮದನಕೇಸರಿಯೆಂಬುವರ ॥ ೬೩ ॥

ಕೈಹಿಡಿದು ಗುಣಮಾಲೆಯು ಶ್ರೀಮತಿ। ಗುಣಮಾಲೆಯಾಗಿ ಬಾಳುವರು।
ಬೆಂಗಳೂರು ನಗರದಲಿ ವಾಸಿಸುತ್ತಲೀ। ಧರ್ಮದಿಂ ಬಾಳುತಲಿಹರು ॥ ೬೪ ॥

ಅಣುವ್ರತ ಗುಣವ್ರತ ಶಿಕ್ಷಾವ್ರತಗಳ। ಶ್ರಾವಕರ ಷಟ್ಕರ್ಮಗಳ।
ಅನುವಾಗಿ ಪಾಲಿಪ ಗುಣಮಾಲೆ ಗುಣಗಳ। ದಿನನಿತ್ಯ ಕೊಂಡಾಡಬೇಕು ॥ ೬೫ ॥

ಮಾವನವರ ಧರ್ಮಪ್ರಚಾರ ಕಾರ್ಯವ। ಸಾನುರಾಗದಿ ಮುಂದುವರಿಸಿ।
ಭಾಷಣ ಬರವಣಿಗೆಯಿಂದ ಧರ್ಮವ। ಮದನಕೇಸರಿ ಗೈಯ್ಯುತಿಹರು ॥ ೬೬ ॥

ದಕ್ಷಿಣಕನ್ನಡ ಬೆಳ್ತಂಗಡಿ ತಾಲ್ಲೂಕಿನ। ಮುಂಜೈಟ್ಟು ಮನೆಯ।
ಸಿದ್ದಪ್ಪಶೆಟ್ಟರ ದ್ವಿತೀಯ ಪುತ್ರರಾದ। ಶ್ರೀ ರಘುಚಂದ್ರ ಅಜ್ರಿಯವರ ॥ ೬೭ ॥

ತಂದು ವಿವಾಹವಗೈದು ಸಂತಸದಲ್ಲಿ। ಮರುದೇವಿಯನು ಧಾರೆಯೆರೆದು।
ಸುಂದರವಾಗಿಹ ಮೈಸೂರು ನಗರದಿ। ಚಂದದಿ ನೀವ್ ಬಾಳಿರೆಂದರ್ ॥ ೬೮ ॥

ಮರುದೇವಿಯವರ ಮಾತು ಹಿತಮಿತ ಮಧುರವು। ಜಿನನೊಳು ಅತಿಭಕ್ತಿವಂತೆ।
ಜಿನಶಾಸನದೇವಿ ಶ್ರೀ ಪದುಮಾವತಿ। ಅನನ್ಯ ಭಕ್ತಿಯಾಗಿಹರು ॥ ೧೯ ॥

ಮನೆಗೆ ಬಂದವರಿಗೆ ಸಂತೋಷದಿಂದಲಿ। ಊಟೋಪಚಾರವಗೈದು।
ಶ್ರಾವಕ ವ್ರತವನು ಪ್ರತಿನಿತ್ಯ ಪಾಲಿಪ। ಸಾಧ್ವಿ ಶ್ರೀ ಮರುದೇವಿಯವರು ॥ ೨೦ ॥

ಧರ್ಮದಿಂ ನಡೆಯುತ ದಾನವಗೈಯ್ಯುತ। ಬಸದಿ ಜೀರ್ಣೋದ್ಧಾರಗೈಯಿಸುತ।
ಮೈಸೂರು ನಗರದ ಶ್ರೀ ರಘುಚಂದ್ರರು। ಶ್ರಾವಕೋತ್ತಮರಾಗಿಹರು ॥ ೨೧ ॥

ಪದುಮಯ್ಯಗೌಡರ ನಾಲ್ಕನೆಯ ಪುತ್ರ ಶ್ರೀ। ಶ್ರಾವಕ ಸಮ್ಯಕ್ ರತ್ನ।
ಶ್ರೀ ಶಾಂತಿವರ್ಮರು ಧರ್ಮಾತಿಶಯದಿಂದ। ಧಾರ್ಮಿಕರಾಗಿ ಬಾಳುತಿಹರ್
॥ ೨೨ ॥

ಬೆಳ್ತಂಗಡಿ ತಾಲ್ಲೂಕಿನ ರವಿರಾಜಬುಣ್ಣರ ದ್ವಿತೀಯ ಪುತ್ರಿ।
ಪುಷ್ಪಲತೆಯರನ್ನು ವಿವಾಹಗೈದು। ಶಾಂತಿವರ್ಮರು ಬಾಳುತಿಹರು ॥ ೨೩ ॥

ಸುಗಂಧಪುಷ್ಪದಂತೆ ಪುಷ್ಪಲತೆಯು। ಧಾರ್ಮಿಕ ಜೀವನ ನಡೆಸಿ।
ಪತಿಯೊಡನೆ ಸಿದ್ಧಕ್ಷೇತ್ರ ದರ್ಶನವನು। ಸತತವು ಮಾಡುತಲಿಹರು ॥ ೨೪ ॥

ಅನಂತನೋಂಪಿಯ ಬಿಡದೆ ತಾವ್ ಮಾಡುತ। ವ್ರತೋಪವಾಸಗೈಯ್ಯುತಲಿ।
ಜಿನರ ಅರ್ಚನೆ ಪೂಜೆ ಜಿನಶಾಸನದೇವ। ದೇವಯ ಭಕುತರಾಗಿಹರು ॥ ೨೫ ॥

ನಿರ್ಗ್ರಂಥ ಮುನಿಗಳ ಜಿನಮಠ ಗುರುಗಳ। ಭಕ್ತಿಯಿಂ ದರುಶನಗೈದು।
ಕುಂದುಕೊರತೆಗಳ ಸತತ ವಿಚಾರಿಸಿ। ಶಾಂತಿವರ್ಮರು ಬಾಳುತಿಹರು ॥ ೨೬ ॥

ಧರ್ಮಕ್ಕೆ ಸಹಾಯ ಬೇಕಾದ ಸಮಯದಿ। ಶಾಂತಿವರ್ಮರು ತಾವು ಸಿಗುವರ್।
ಧರ್ಮದ ಸೇವೆಯ ಮಾಡಲು ಸಂತಸ। ತನು ಮನ ಧನದಿಂ ಶ್ರಮಿಸುವರ್
॥ ೨೭ ॥

ಪದುಮಯ್ಯಗೌಡರ ಪಂಚಮ ಪುತ್ರಿ। ಶ್ರೀಮತಿ ಶಾಂತಕುಮಾರಿಯವರು।
ಮೈಸೂರಿನೊಳು ವಿದ್ಯಾಭ್ಯಾಸವಗೈದು। ವಿದ್ಯಾವಂತೆಯಾಗಿಹರು ॥ ೨೮ ॥

ಮೈನಾಡು ಮುರುಣೀಕೆರೆ ಶ್ರೀ ದೇವೇಶ। ಗೌಡರ ಪುತ್ರನವರಿಸಿ।
ವೀರೇಂದ್ರಕುಮಾರರ ಧರ್ಮಪತ್ನಿಯೆನ್ನಿಸಿ। ದಾನಧರ್ಮದಿ ಬಾಳುತಿಹರು ॥ ೨೯ ॥

ಸಮ್ಯಕ್ ಸಂಪನ್ನೆ ಶಾಂತಕುಮಾರಿಯು । ಶಾಂತಲಾದೇವಿಯ ತೆರದಿ ।
ಸಮ್ಯಕ್ ಧರ್ಮವ ನಿಷ್ಠೆಯಿಂ ಪಾಲಿಪ । ಮನವಚನ ಕಾಯಪವಿತ್ರೆ ॥ ೮೦ ॥

ಪವಿತ್ರಕಾರ್ಯದಿ ಪವಿತ್ರಭಾವದಿ। ಬಂದವರನ್ನು ಸಂತೈಸಿ ।
ಶ್ರಾವಕಾಚಾರದ ನೀತಿ ನಿಯಮದಂತೆ । ಸಾಧ್ವಿಯಾಗಿ ಬಾಳುತಿಹರು ॥ ೮೧ ॥

ತಂದೆ ತಾಯಿಗಳಿಂದ ಬಂದಂಥ ಬಳುವಳಿ । ಸತ್ಯ ಧರ್ಮ ನೀತಿಯಂತೆ ।
ವೀರೇಂದ್ರಕುಮಾರರು ಬಾಳುತಲಿಹರು । ಉತ್ತಮ ಸತಿಯೊಡಗೂಡಿ ॥ ೮೨ ॥

ಉತ್ತಮ ಪುತ್ರಪುತ್ರಿಯರನ್ನು ಪಡೆದ ಶ್ರೀ । ಪದುಮಯ್ಯಗೌಡರೆ ಧನ್ಯ ।
ಉತ್ತಮ ಶ್ರೀ ಜಿನಧರ್ಮದೊಳು ನಿಂತ । ಪದುಮಯ್ಯನವರಾತ್ಮ ಧನ್ಯ ॥ ೮೩ ॥





ಕೂಟಮಂಡ ನಿವಾಸದಲ್ಲಿ ಪದ್ಮಯ್ಯನವರು ನಿರ್ಮಿಸಿದ
ಕನ್ನಡಿಮಂಟಪ ಪೂಜಾಗೃಹದಲ್ಲಿರುವ

ಭಗವಾನ್ ಶ್ರೀ ಪಾರ್ಶ್ವನಾಥಸ್ವಾಮಿ

## ಮನೆಯ ಜಿನಮಂದಿರ

ಭಾರತ ದೇಶದ ಕೇರಳ ರಾಜ್ಯದ। ವೈನಾಡು ಮಲೆನಾಡಾಗಿಹುದು।
ಚೆಂಬ್ರ ಪರ್ವತದ ಭಾಗದಿ ಕೂಟ್ಟಮುಂಡ। ಬೆಟ್ಟವು ತಾನೊಂದಿಹುದು ॥ ೮೪ ॥

ಕೂಟ್ಟಮುಂಡದ ಬೆಟ್ಟದ ಮೇಲೆ ಶ್ರೀ ರತ್ನ। ತ್ರಯ ವಿಲಾಸ ಗೃಹವಿಹುದು।
ಅದರೊಳು ಶ್ರೀ ಪಾರ್ಶ್ವನಾಥಜಿನೇಂದ್ರನ। ಕನ್ನಡಿಮಂದಿರವಿಹುದು ॥ ೮೫ ॥

ಸಮ್ಯಕ್ ಸಂಪನ್ನ ಪದುಮಯ್ಯಗೌಡರು। ದೈವದ ಪ್ರೇರಣೆಯಿಂದ।
ಶಾಸನದೇವತೆ ಶ್ರೀ ಕೃಪೆಯಿಂದಲಿ। ಸ್ವಂತ ಬುದ್ಧಿಯಿಂ ನಿರ್ಮಿಸಿದರು ॥ ೮೬ ॥

ಸುಂದರ ಗೃಹದೊಳು ಸುಂದರವಾದ ಶ್ರೀ। ಜಿನಮಂದಿರವನು ನಿರ್ಮಿಸುತ।
ವೀತರಾಗ ಶ್ರೀ ಪಾರ್ಶ್ವ ಜಿನೇಂದ್ರನ। ಪ್ರೀತಿಯಿಂದಲಿ ಸ್ಥಾಪಿಸಿದರು ॥ ೮೭ ॥

ಬಂದವರೆಲ್ಲರು ಶ್ರೀ ಜಿನದರ್ಶನ। ಆನಂದದಿಂ ಗೈಯಲೆಂದು।
ಚಂದದಿಂ ನಿರ್ಮಿಸಿ ದರುಶನ ಮಾಡಿಸಿ। ಶ್ರೀ ಪುಣ್ಯಭಾಗಿಗಳಾದರ್ ॥ ೮೮ ॥

ಸುಂದರವಾಗಿಹ ಪಾರ್ಶ್ವ ಜಿನೇಂದ್ರನ। ಮಂದಿರ ವಿವರಣೆ ಕೇಳಿ।
ಅಂದದ ಚೆಂದದ ಶ್ರೀ ಜಿನನ ದಿವ್ಯ। ಪಾವನ ದರುಶನ ಮಾಡಿ ॥ ೮೯ ॥

ಎತ್ತೆತ್ತ ನೋಡಲು ಕತ್ತೆತ್ತಿ ತಿರುಗಲು। ಶ್ರೀ ಜಿನಪ್ರತಿಮೆ ಕಾಣುವುದು।
ಲೆಕ್ಕವಿಲ್ಲದಷ್ಟು ಮೂರ್ತಿಯ ಕಾಣಲು। ಕರ್ಮಕ್ಷಯವು ತಾನಾಗುವುದು ॥ ೯೦ ॥

ವಿಧ ವಿಧ ಬಣ್ಣದ ದೀಪಗಳಿಂದಲಿ। ಮಂದಿರ ತಾನು ಶೋಭಿಪುದು
ಹಲವು ಬಣ್ಣದಿ ಚೆಲುಚೆಲುವಿನಾಕಾರದಿ। ಮಂದಿರ ಸುಂದರವಿಹುದು ॥ ೯೧ ॥

ಕಲಿಕಾಲದ ಸಮವಸರಣವೆಂಬಂತೆ। ಕಣ್ಣುಗಳಿಗಾನಂದವಿಹುದು।
ಸಮವಸರಣಕೆ ಹೊಕ್ಕರೆ ಧರ್ಮ ಒಪ್ಪಂತೆ। ಧರ್ಮ ಬುದ್ಧಿಯು ತಾ ಬರುವುದು
॥ ೯೨ ॥

ತ್ರಿಮೇಖಲಾ ಪೀಠದ ಮೇಲೆ ಪಾರ್ಶ್ವ। ಜಿನೇಂದ್ರನ ಪ್ರತಿಮೆ ತಾನಿಹುದು।
ಪಾರ್ಶ್ವ ಜಿನೇಂದ್ರನ ಪಾದದ ಕೆಳಗಡೆ। ಪದ್ಮಾವತಿದೇವಿ ಇಹರು ॥ ೯೩ ॥

ಸುಂದರದಾನಂದ ನಂದಾದೀಪವು। ಎಂದೆಂದು ತಾನುರಿಯುವುದು।
ಕಣ್ಣುಗಳಿಗಾನಂದ ನೀಡುತ ನಿತ್ಯವು। ಧರ್ಮದ ಬೆಳಕ ತೋರುವುದು ॥ ೯೪ ॥

ಬೆಳಗಿನ ಜಾವದಿ ಪದ್ಮಾವತಿದೇವಿ । ಕಳಸವನ್ನು ಸ್ಥಾಪಿಸುತಾ ।
ಭಗವಂತನಿಗೆ ಅಷ್ಟದ್ರವ್ಯಗಳಿಂದಲಿ । ಪೂಜೆಯ ಮಾಡುತಲಿಹರು ॥ ೯೫ ॥

ಶಾಸನದೇವತೆ ಶ್ರೀ ಪದ್ಮಾವತಿ । ದೇವಿಯ ಪೂಜೆ ಗೈಯುವರು ।
ಬ್ರಹ್ಮಯಕ್ಷ ಜ್ವಾಲಾಮಾಲಿನಿದೇವಿಗೆ । ಷೋಡಶೋಪಚಾರ ಗೈಯುವರು ॥ ೯೬ ॥

ಮಂಗಲಾರತಿಗೈದು ದೀಪವ ಸರಿಗೈದು । ಬಂದ ಭಕ್ತರ ದರುಶನಕೆ ।
ಸುಂದರವಾಗಿಯೂ ಅಣಿಮಾಡುತಿರ್ದರು । ಧರ್ಮಾತ್ಮ ಪದುಮಯ್ಯಗೌಡರ್ ॥ ೯೭ ॥

ಬಂದ ಭಕ್ತರುಗಳ್ಗೆ ತಾವಾಗಿಯೇ ನಿಂತು ವಿಧವಿಧದೊಳು ತೋರುತಿರ್ದರ್ ।
ತೋರುವ ಸಮಯದಿ ಧರ್ಮೋಪದೇಶವ । ತಪ್ಪದೆ ತಾವ್ ಹೇಳುತಿರ್ದರ್ ॥ ೯೮ ॥

ಇಂಥ ಮಹೋನ್ನತ ಕ್ಷೇತ್ರವ ನಿರ್ಮಿಸಿ । ಬಹು ಪುಣ್ಯರಾಶಿಯ ಗಳಿಸಿ ।
ಪುಣ್ಯವಂತರಾದ ಪದುಮಯ್ಯಗೌಡರು । ಚೆಂದದಿಂ ಬಾಳುತಲಿರ್ದರು ॥ ೯೯ ॥

## ಆಡಳಿತಾಂಗ

ಕಾರ್ಯಾಲಯ ಕಾರ್ಯ ಸುಸೂತ್ರ ನಡೆಯಲು ಧರ್ಮದ ದಕ್ಷತೆಯಿರುವ ।
ಶ್ರೀ ದೇವರಾಜಯ್ಯನವರ ನೇಮಿಸಿಕೊಂಡು । ಲೆಕ್ಕಪತ್ರವ ಬರೆಸಿದರು ॥ ೧೦೦ ॥

ಉತ್ತಮ ಆಂಗ್ಲಭಾಷ ಪರಿಜ್ಞಾನಿ । ಶ್ರೀ ದೇವರಾಜಯ್ಯನವರು ।
ಉತ್ತಮವಾಗಿಯೂ ಕಾರ್ಯ ನಿರ್ವಹಿಸಿ । ಧರ್ಮ ಪ್ರಶಂಸೆಯ ಪಡೆದರ್ ॥ ೧೦೧ ॥

ಎಂ. ಪಿ. ಸಿ. ಜೈನರು ಪದುಮಯ್ಯಗೌಡರ । ಆಡಳಿತಾಂಗದೊಳಿದ್ದು ।
ತೋಟ ಭೂಮಿಯ ಕಾರ್ಯವನು ನ್ಯಾಯದಿಂ ಗೈದು । ಪ್ರಾಮಾಣಿಕ ಸೇವೆ ಗೈದರ್ ॥ ೧೦೨ ॥

ಎಂ. ಪಿ. ಸಿ. ಜೈನರ ಪ್ರಾಮಾಣಿಕತೆಯನ್ನು । ಕಂಡ ಶ್ರೀ ಪದುಮಯ್ಯಗೌಡರ್ ।
ಪೊಂಬುಜ ಕ್ಷೇತ್ರದಿ ನಿಂದು ಶ್ರೀ ಪದ್ಮಾಂಬೆ । ಸೇವೆಯ ಗೈಯಬೇಕೆಂದರ್ ॥ ೧೦೩ ॥

ಪದುಮಯ್ಯಗೌಡರು ಶ್ರೀ ಜಿನಚಂದ್ರರು । ಶ್ರೀ ಎಂ. ಪಿ. ಸಿ. ಜೈನರನ್ನು ।
ಕಟ್ಟಡ ನಿರ್ಮಾಣ ಕಾರ್ಯ ನಿರ್ವಹಿಸಲು । ಪೊಂಬುಜ ಕ್ಷೇತ್ರಕ್ಕೆಕಳಿಸಲ್ ॥ ೧೦೪ ॥

ಕ್ಷೇತ್ರದ ಸೇವೆಯ ನಿಷ್ಠೆಯಿಂ ಗೈದರು । ಗುರುಗಳಾಶೀರ್ವಾದ ಪಡೆದರ್ ।
ಶ್ರೀ ಪಾರ್ಶ್ವನಾಥ ಪದ್ಮಾವತಿ ಕ್ಷೇತ್ರದ । ಸೇವೆ ಸಂತೋಷದಿ ಗೈದರ್ ॥ ೧೦೫ ॥

ಎಂ. ಪಿ. ಸಿ. ಜೈನರನ್ನು ಚಂದ್ರಶೆಟ್ಟರು । ಎಂದು ಜೈನರು ಕರೆಯುತ್ತಿರ್ದರ್ ।
ಎಂ. ಪಿ. ಸಿ. ಜೈನರ ಪ್ರಾಮಾಣಿಕತೆಯನ್ನು । ಎಂದೆಂದು ಕೊಂಡಾಡುತಿರ್ದರ್
॥ ೧೦೬ ॥

ಮೈಸೂರಿನಾಸ್ಥಾನ ವಿದ್ವಾಂಸರಾದ । ಶ್ರೀ ಶಾಂತಿರಾಜಶಾಸ್ತ್ರಿಗಳವರ ।
ಹಿರಿಯ ಪುತ್ರರು ಶ್ರೀ ನಾಗಕುಮಾರರು । ವೈನಾಡಿನೊಳು ಬಾಳಿದರು ॥ ೧೦೭ ॥

ನಾಕುಮಾರ್ ನಾಕುಮಾರ್ ಎನ್ನುತ । ಶ್ರೀ ನಾಗಕುಮಾರರನ್ನು ಕರೆಯುತ ।
ಧರ್ಮದ ಕೆಲಸವ ಪೇಳುತಲಿರ್ದರು । ಧರ್ಮಾತ್ಮ ಪದುಮಯ್ಯನವರು ॥ ೧೦೮ ॥

ಹೇಳಿದ ಕೆಲಸವ ತಪ್ಪದೆ ಮಾಡುತ । ಲಿರ್ದರು ನಾಗಕುಮಾರರ್ ।
ಅಣ್ಣಯ್ಯ ಅಣ್ಣಯ್ಯನೆಂದು ಕರೆಸಿಕೊಂಡು । ನಾಗಕುಮಾರ್ ಶೋಭಿಸಿದರು ॥೧೦೯ ॥

ತಂದೆಯ ಕಾಲದಿಂ ಸೇವೆಯಗೈದಂಥ ಶ್ರೀ । ಪಿ. ಕೆ. ವರ್ಧಮಾನರನು ।
ವರ್ಧಮಾನ ವರ್ಧಮಾನರೆಂದೆನ್ನುತ । ಧರ್ಮ ಕೆಲಸ ಪೇಳುತಿರ್ದರ್ ॥ ೧೧೦ ॥

ಯಾವುದೆ ಶುಭ ಸಮಾರಂಭದ ಕೆಲಸಕು । ವರ್ಧಮಾನರನು ನೇಮಿಸುತ ।
ಧರ್ಮದ ಸೇವೆಯ ಮಾಡು ನೀನೆನ್ನುತ । ವರ್ಧಮಾನರ ಬಳಸಿಕೊಂಡರ್ ॥ ೧೧೧ ॥

ಸೇವಾ ಶುಶ್ರೂಷೆ ವೈಯ್ಯಾವೃತವ । ವರ್ಧಮಾನರಲಿ ನೋಡಬೇಕು ।
ಮಣಿಯಂಗೂಡಿನ ಚರಿತೆಯ ಕೇಳಲು ಶ್ರೀ । ವರ್ಧಮಾನರ ಬಳಿ ಹೋಗಬೇಕು
॥ ೧೧೨ ॥

## ಸುಬ್ಬೇಗೌಡರು

ಕೃಷ್ಣೇಗೌಡರ ಹಿರಿಯ ಪುತ್ರರಾಗಿ । ಜನಿಸಿದರು ಸುಬ್ಬೇಗೌಡರ್ ।
ಧರ್ಮದ ಸಾಕಾರ ಮೂರ್ತಿಯಂತೆ ಬಾಳಿ । ಧರ್ಮರಾಯನೆನಿಸಿದರು ॥ ೧೧೩ ॥

ಗುಣಾವತಿಯಮ್ಮನವರನು ವರಿಸಿದ ಶ್ರೀ । ಧರ್ಮಾತ್ಮ ಸುಬ್ಬೇಗೌಡರ್ ।
ದಾನ ಧರ್ಮ ಪರೋಪಕಾರದಿಂದಲಿ । ಜನಮನದಲಿ ನೆಲಸಿದರು ॥ ೧೧೪ ॥

ಹಳೆಯ ಕಲ್ಪಾವತಿಯೆಂದೆಂಬ ಸ್ಥಳದಿಂದ । ಅನಂತನಾಥನ ತಂದು ।
ಪುಲಿಯಾರ್ಮಲೆ ಸ್ಥಳದೊಳು ನೂತನವಾಗಿ । ಜಿನಮಂದಿರವನು ನಿರ್ಮಿಸಿದರ್
॥ ೧೧೫ ॥

ವೈಭವದೊಳು ಪಂಚಕಲ್ಯಾಣ ನಡೆಸುತಾ । ಬಂದವರನು ಸಂತೈಸುತಾ ।
ಅತಿಥಿಸತ್ಕಾರವನನುವಾಗಿಗೈಸುತ್ತಾ । ಸುಬ್ಬೇಗೌಡರು ನಡೆಸಿದರು ॥ ೧೧೬ ॥

ಗುಣಭದ್ರಾಚಾರ್ಯರ ಉತ್ತರ ಪುರಾಣ । ವನು ಭಕ್ತಿಯಿಂದ ಪ್ರಕಟಿಸಿ ।
ಇಪ್ಪತ್ತುಮೂರು ತೀರ್ಥಂಕರ ಚರಿತೆಯ । ತಿಳಿಯಲು ಸಹಾಯಗೈದರ್ ॥ ೧೧೭ ॥

ಕಾಡಿನ ದೊರೆಯೆಂದು ಪ್ರಖ್ಯಾತರಾಗಿರ್ದ । ಶ್ರೀ ಕೃಷ್ಣೇಗೌಡರು ತಾವು ।
ಜಿನಸೇನಾಚಾರ್ಯರ ಮಹಾಪುರಾಣವ । ಪ್ರಕಟಿಸಿ ಕೃತಾರ್ಥರಾದರ್ ॥ ೧೧೮ ॥

ಶ್ರೀ ಶಾಂತಿರಾಜಶಾಸ್ತ್ರಿಗಳ ಕೈಯಲಿ । ಅರ್ಥವ ತಾವು ಬರೆಸುತಾ ।
ಧಾರ್ಮಿಕ ಸೇವೆಯ ಗೈದರು ತಂದೆ । ಮಕ್ಕಳು ಸಂತೋಷದಿಂದ ॥ ೧೧೯ ॥

ಮಹಾಪುರಾಣವ ಪ್ರಕಟಿಸಿ ಮಣಿಯಂಗೂಡ । ಮನೆತನಕೆ ಕೀರ್ತಿ ತಂದರ್ ।
ದೇಶದಗಲಕೆಲ್ಲ ವೈನಾಡಹೆಸರನು । ಸ್ಮರಿಸುವ ಕಾರ್ಯವ ಗೈದರ್ ॥ ೧೨೦ ॥

ಇಂಥ ಮಹೋನ್ನತ ಸುಬ್ಬಯ್ಯಗೌಡರ । ಪುತ್ರರಾಗಿ ಜನಿಸಿದರು ।
ಪದುಮಯ್ಯಗೌಡರು ತಂದೆಯಂತೆಯೆ । ಜಿನಧರ್ಮವ ಕಾಪಾಡಿದರು ॥ ೧೨೧ ॥

ಉತ್ತಮ ಪುತ್ರನ ಪಡೆಯಲು ಶ್ರೀ ಜಿನ । ಭಕ್ತಿಯ ಪುಣ್ಯವು ಬೇಕು ।
ಉತ್ತಮ ಮಾತಾಪಿತರನು ಪಡೆಯಲು । ಧರ್ಮದಿ ಪ್ರೀತಿಯು ಬೇಕು ॥ ೧೨೨ ॥

ಉತ್ತಮ ಮಾತಾಪಿತೃವ ಪಡೆದು । ಪದುಮಯ್ಯನವರು ಶೋಭಿಸಿದರ್ ।
ಉತ್ತಮ ಪುತ್ರನ ಪಡೆದು ಸುಬ್ಬೇಗೌಡ- । ಗುಣವತಿಯರು ಶೋಭಿಸಿದರು ॥ ೧೨೩ ॥

## ಧರ್ಮದ ಬಗ್ಗೆ ಭಾವೋದ್ವೇಗ ನುಡಿ

ಧರ್ಮವು ಧರ್ಮಾತ್ಮರಿಂದ ಬೇರೆಯಲ್ಲ । ಸಮಂತಭದ್ರಾಚಾರ್ಯ ನುಡಿಯು ।
ಧರ್ಮಾತ್ಮರನು ಗೌರವದೊಳು ಕಾಣುವ । ಪದುಮಯ್ಯನವರ ನಡತೆಯು ॥ ೧೨೪ ॥

ಸಾವಿರದೊಂಬೈನೂರಮೂವತ್ಮೂರರೊಳ್ । ಸರಗೂರು ಜಿನಮಂದಿರದೊಳ್ ।
ಶ್ರೀಕಾಂತಶಾಸ್ತ್ರಿಗಳ ಸಮ್ಮುಖದೊಳು ಶ್ರೀ । ಪದುಮಯ್ಯನವರು ನುಡಿದರು ॥ ೧೨೫ ॥

ಯಾರದೊ ಮನೆಯ ಅಶಾಂತಿ ವಿಚಾರವ । ನಾನು ನೆನೆದು ದುಃಖಿಯಾದೆ ।
ಶಾಂತಿಯು ಸ್ಥಾಪಿಸಲ್ ಮಂತ್ರವು ಬೇಕೆಂದು । ನೇಮಿಸಾಗರರನು ಕಂಡೆ ॥ ೧೨೬ ॥

ಶಾಂತಿಯು ಸ್ಥಾಪಿಸಲ್ ಮಂತ್ರವು ಬೇಕೆಂದು । ಸಂದೇಹವಿಲ್ಲದೆ ಕೇಳ್ದಿ ।
ನೇಮಿಸಾಗರವರ್ಣಿಜಿಯವರು ನನ್ನ । ನ್ನೇಕದೃಷ್ಟಿಯಿಂದ ನೋಡಿ ಹೇಳ್ದರ್
॥ ೧೨೭ ॥

ಶಾಂತಿಯು ಸ್ಥಾಪನೆಯಾಗಲಿಯೆನ್ನುವ । ಭಾವನೆಯೇ ಶಾಂತಿ ಮಂತ್ರ ।
ಭಾವನೆ ಭವ್ಯವಾದರೆ ದಿವ್ಯ ಮಂತ್ರವು । ಭಾವನೆ ಭವನಾಶ ಮಂತ್ರ ॥ ೧೨೮ ॥

ಭಾವವೆ ಪುಣ್ಯಕೂ ಪಾಪಕೂ ಕಾರಣ । ಭಾವವೆ ಮೋಕ್ಷ ಕಾರಣವು ।
ಶುಭಭಾವನೆಯ ಮಾಡಿ ಶುಭ ಫಲ ಪಡೆದು । ಸಂಸಾರಸಾರವಾಗಿರಿಸಿ ॥ ೧೨೯ ॥

ಸದ್ಭಾವನೆಯಿಂದ ಹೇಳುವ ವಚನವೆ । ಅದುವೆ ಮಹಾ ದಿವ್ಯ ಮಂತ್ರ ।
ಮಂತ್ರತಂತ್ರವು ಯಾಕೆ ಶುಭಮನ ವಚನ । ಕಾಯವೆ ತಾ ದಿವ್ಯ ಮಂತ್ರ ॥ ೧೩೦ ॥

## ಪರಸ್ಥಳಗಳಲ್ಲಿ ಧರ್ಮ ಪ್ರಭಾವನೆ

ಬೆಂಗಳೂರು ಮೈಸೂರು ತುಮಕೂರು । ಹೊಸದುರ್ಗ ಹಲವು ಸ್ಥಳದೊಳು ।
ಪದುಮಯ್ಯಗೌಡರು ಅಳಿಯಂದಿರೊಡಗೂಡಿ । ಧರ್ಮಪ್ರಭಾವನೆಗೈಯ್ದರ್ ॥೧೩೧॥

ಹಿರಿಯಳಿಯಂದಿರು ಮದನಕೇಸರಿಯವರು । ಸತತವು ಮಾವಂದಿರೊಡನೆ ।
ಸಂಚರಿಸುತ ಧರ್ಮದುಪದೇಶವಗೈದರು । ಕರ್ನಾಟಕಾಂಧ್ರ ರಾಜ್ಯದೊಳು ॥೧೩೨॥

ಸರಗೂರು ಮಲೆಯೂರು ದಕ್ಷಿಣಕನ್ನಡ । ಗುಬ್ಬಿ ಗೌರಿಬಿದನೂರಿನೊಳು ।
ಪದುಮಯ್ಯಗೌಡರು ಸತತವು ನಡೆದಾಡಿ । ಧರ್ಮದ ಸಂದೇಶ ಪೇಳ್ದರ್ ॥ ೧೩೩ ॥

ಸಾಧು ಜೈನರ ಸೋದರ ಭಾವದಿ ಕಂಡರು । ಪದುಮಯ್ಯಗೌಡರು ।
ಧನಸಹಾಯವಗೈದು ಧರ್ಮ ಬೀಜವ ಬಿತ್ತಿ । ಧರ್ಮದ ಫಲವನ್ನುಣಿಸಿದರ್
॥ ೧೩೪ ॥

ಮಂಡ್ಯ ಹಾಸನ ಶಿವಮೊಗ್ಗ ಜಿಲ್ಲೆಯೊಳ್ । ಪದುಮಯ್ಯನವರು ಸಂಚರಿಸಿ ।
ದಾನದ ಫಲವನು ಧರ್ಮದ ಫಲವನು । ಭಕ್ತಿಭಾವದಿ ಪೇಳಿದರು ॥ ೧೩೫ ॥

ಸರಗೂರಿನ ಜೈನ ವಿದ್ಯಾರ್ಥಿ ನಿಲಯಕೆ । ಸತತವು ಭೇಟಿಯ ಕೊಡುತಾ ।
ಧರ್ಮ ವಿಚಾರವ ಸುಲಭದಿ ಪೇಳುತ । ಪದುಮಯ್ಯನವರಿರುತಿರ್ದರ್ ॥ ೧೩೬ ॥

## ವೈನಾಡಿನಲ್ಲಿ ಧರ್ಮ ಪ್ರಭಾವನೆ

ಕೈಚೀಲ ಹಿಡಿಯುತ ಮನೆ ಮನೆ ತಿರುಗುತ। ಜಪಮಣಿಯನು ತಿರುಗಿಸುತ।
ನಡೆವಾಗ ನುಡಿವಾಗ ಧರ್ಮವ ಪೇಳುತ। ವೈನಾಡಿನೊಳು ತಿರುಗಿದರು ॥ ೧೩೭॥

ವರದೂರು ಗ್ರಾಮದಿ ವಿ. ಕೆ. ವರ್ಧಮಾನ। ಗೌಡರ ಸಹಯೋಗದಲ್ಲಿ।
ಮನೆ ಮನೆ ತಿರುಗುತ ಜಿನಧರ್ಮ ಪೇಳುತ। ಜನರನು ಜಿನಧರ್ಮಕ್ಕೆಳೆದರ್ ।೧೩೮ ॥

ನೀರುಬೈಲು ಪುತ್ತಂಗಡಿ ಸ್ಥಳದೊಳು । ರಾಮಚಂದ್ರ ದೇವಚಂದ್ರ।
ಗೌಡರ ಸಹಯೋಗದಲಿ ಸದ್ಧರ್ಮದ। ಪ್ರಚಾರ ಮಾಡಿದರ್ ಗೌಡರ್ ॥ ೧೩೯ ॥

ಮಾನಂದವಾಡಿ ಪುದಿಯೂಡ ಊರ್ಪಳ್ಳಿ । ಪಾಲ್ಗುಂದದೊಳು ಸಂಚರಿಸುತ।
ಜಿನರುಪದೇಶವ ಸುಲಭದಿಗೈಯ್ಯುವ। ಸನ್ಮತಿ ಧರ್ಮವ ಪೇಳ್ದರ್ ॥ ೧೪೦ ॥

ಬೆಣ್ಣಾಡು ಕೊಯ್ನಂಗಾಡು ಗರಿಂಗುತ್ತಿ। ಮೊದಲಾದ ಸ್ಥಳದಿ ಸಂಚರಿಸಿ।
ಅಷ್ಟವಿಧಾರ್ಚನ ಪೂಜಾಮಹತ್ವವ। ನಿಷ್ಠೆಯಿಂ ತಾವ್ ತಿಳಿಸಿದರು ॥ ೧೪೧ ॥

ದಕ್ಷಿಣ ವೈನಾಡು ಉತ್ತರ ವೈನಾಡು । ಮನೆ ಮನೆಯಲ್ಲಿಯೂ ನಿಂದು।
ಜನಮನದೊಳು ಜಿನಭಜನೆಯ ಮಾಳ್ಪುದ। ನಯವಾಗಿ ತಾವು ತೋರಿದರು ।೧೪೨॥

ಖ್ಯಾತಿ ಪೂಜಾಲಾಭಾಪೇಕ್ಷೆಯಿಲ್ಲದೆ ಧರ್ಮ। ಪ್ರಚಾರವ ನಿತ್ಯ ಗೈದು।
ಪದುಮಯ್ಯನೆಂದರೆ ಧರ್ಮದ ಪುರುಷನೆಂ। ಬೆಸರನು ಜನರಿಂ ಪಡೆದರು ॥ ೧೪೩ ॥

ಧಾರ್ಮಿಕ ಪುರುಷನ ಧರ್ಮವೆ ಕಾಯ್ವುದು। ಧರ್ಮವು ಸತತ ರಕ್ಷಿಪುದು।
ಧರ್ಮವ ನಂಬಿದವರಿಗೆ ಭಯವಿಲ್ಲ। ಧರ್ಮವೆ ಬಂಧು ಎಲ್ಲರಿಗೂ ॥ ೧೪೪ ॥

ಅಂದು ಶ್ರೀ ದಶಲಕ್ಷಣ ಧರ್ಮ ಸಮಾ। ರೋಪದ ಸಂದರ್ಭದೊಳು।
ಸುಂದರವಾಗಿ ಶ್ರೀ ಚಂದ್ರನಾಥರು। ಪದುಮಯ್ಯನವರನು ಸ್ಮರಿಸಿದರ್ ॥ ೧೪೫ ॥

ನಾವು ಚಿಕ್ಕವರಿದ್ದಾಗ ಶ್ರೀ ಪದುಮಯ್ಯ। ಗೌಡರು ಬರುವುದ ಕಂಡು।
ಪದುಮಯ್ಯ ಗೌಡರ್ಗೆ ಕೆಲಸವೇನಿಲ್ಲವೆ। ಪರಿಹಾಸ್ಯ ಮಾಡುತಲಿರ್ದೆವ್ ॥ ೧೪೬ ॥

ಸಂಜೆಯುಗೌಡರು ಬಂದರು ಎಂದೆಂಬ। ಹಾಸ್ಯ ವಚನವ ಪೇಳಿದೆವು।
ಸಂಜೆಯುಗೌಡರ ಧರ್ಮ ಪ್ರಭಾವವು। ಇಂದು ನಮಗೆ ತಿಳಿಯಿತು ॥ ೧೪೭ ॥



ಅತ್ಯಾವಶ್ಯಕವಾದಷ್ಟೇ ಉಡುಪಿನ ಧರ್ಮಾತ್ಮ ಪದ್ಮಯ್ಯನವರು

ಕಲಿಗಾಲದ ಸಮವಸರಣದಂತೆ ಎಲ್ಲರ ಮನೆ ಮನೆಗೂ ತಿರುಗಿ ಧರ್ಮದ ತಿಳುವಳಿಕೆ, ಪೂಜೆ, ಶುಭಭಾವನೆ, ಭಾವಪೂಜೆ ಮಾಡುವ ವಿಧಾನ ಎಲ್ಲವನ್ನು ಹೇಳಿ ಕೊಡುತ್ತಿದ್ದ ಮಹಾನ್ ಧಾರ್ಮಿಕಪ್ರೇಮಿ, ಶ್ರೀಮಂತ, ಧೀಮಂತ ವ್ಯಕ್ತಿಯಾಗಿದ್ದ

## ದಿ|| ಎಂ. ಎಸ್. ಪದ್ಮಯ್ಯಗೌಡರ ಪವಿತ್ರಾತ್ಮನಿಗೆ

# ಅ ರ್ಪ ಣೆ

ಶ್ರೀ ಎಂ. ಸಿ. ಪದ್ಮರಾಜ್ ಮತ್ತು ಎಂ.ಸಿ. ರವೀಂದ್ರಕುಮಾರ್ ಸಹೋದರರು
ಎಂ. ಪಿ. ಸಿ. ಎಸ್ಟೇಟ್
ಕನ್ನಂಬೆಟ್ಟ, ವೈನಾಡು ಜಿಲ್ಲೆ, ಕೇರಳ

ಮೃದುವಾಗಿ ನಯವಾಗಿ ಅಪರಿಗ್ರಹಿಯಾಗಿ । ಬರುವುದ ಜನಗಳ ಕಂಡು ।
ಭಯಭಕ್ತಿ ಭಾವದಿ ತಲೆ ಬಾಗುತಿರ್ದರು ! ನಿರಾಡಂಬರಿ ಗೌಡರಿಗೆ ॥ ೧೫೮ ॥

ಮೂರು ಬಾಡಿಯೂ ಮೂರು ಪಂಚೆ ಮೂರು । ವಲ್ಲಿ ಮೂರು ಕೌಪಿನ ಕೈವಸ್ತ್ರ ।
ಪದುಮಯ್ಯಗೌಡರ ವಸ್ತ್ರ ಪರಿಗ್ರಹ । ಮುದದಿಂದ ನೀವಿದ ನಂಬಿ ॥ ೧೫೯ ॥

ನಾಡಿನಗಲಕೆಲ್ಲ ಸುತ್ತಿದರ್ ಪದುಮಯ್ಯ । ಧರ್ಮೋಪದೇಶ ಕಾರಣದಿಂ ।
ನುಡಿದಂತೆ ನಡೆದು ತಾವ್ ತೋರಿಸಿದರು ಮತ್ತೆ । ನಡೆವಂತೆ ನುಡಿಯಬೇಕೆಂದರು
॥ ೧೬೦ ॥

ಎಲ್ಲಾ ಕಾಲಕ್ಕೂ ಪದುಮಯ್ಯಗೌಡರು । ಬಿಳಿ ಖಾದಿ ವಸ್ತ್ರ ಧರಿಸುತ ।
ಖಾದಿಯ ವಸ್ತ್ರದ ಮಹಿಮೆಯ ಪೇಳುವ । ಖಾದಿದಾರಿಯೆನಿಸಿದರು ॥ ೧೬೧ ॥

ಕೂಡಿಕೆ, ಕಳಿಕೆ, ಗಣಿಕೆ, ಭಾಗಿಕೆಯ ಲೆಕ್ಕ । ಪದುಮಯ್ಯರಲಿ ಕಲಿಯಬೇಕು ।
ನಿತ್ಯದ ಲೆಕ್ಕವ ಬರೆಯಲು ಪದುಮಯ್ಯ । ಗೌಡರ ಸಹವಾಸ ಬೇಕು ॥ ೧೬೨ ॥

ಅಂಗೈಯಗಲದ ಪುಸ್ತಕದೊಳು ಭೂ । ಮಂಡಲ ಲೆಕ್ಕವ ನೀಡುವ ।
ಸುಂದರ ಗಣಿತದ ಕಲೆಯನು ಪದುಮಯ್ಯ । ಗೌಡರು ತಾವರಿತಿರ್ದರ್ ॥ ೧೬೩ ॥

ಗಣಿತದ ಪಂಡಿತನಾದರೂ ಪದುಮಯ್ಯ । ಗೌಡರ ಲೆಕ್ಕವ ನೋಡಿ ।
ಬೆರಗಾದರಿವರೆಲ್ಲ ಕಲಿತರು ಗಣಿತದ । ಸುಂದರ ಶ್ರೀ ಕಲೆಯನು ॥ ೧೬೪ ॥

ಕನ್ನಡಿಯೊಳು ಮುಖ ಚೆನ್ನಾಗಿ ಕಾಣುವ । ತೆರದೊಳು ಲೆಕ್ಕವ ಬರೆದು ।
ಆಯ, ವ್ಯಯ, ಬಾಕಿ ನಿತ್ಯದ ಲೆಕ್ಕವ । ದಿನ ದಿನ ಬರೆಯುತಲಿರ್ದರ್ ॥ ೧೬೫ ॥

ಬಂದಂಥ ನೆಂಟರ್ಗೆ ತಾವೇ ಹಾಸಿಗೆ ಹಾಸಿ । ಚೆನ್ನಾಗಿ ನಿದ್ರಿಸಿರೆನುತಾ ।
ಪದುಮಯ್ಯಗೌಡರು ಅತಿಥಿಸೇವೆಯ ಮಾಡಿ । ಹಸನಾಗಿ ಬಾಳುತಲಿರ್ದರ್ ॥ ೧೬೬ ॥

ಅತಿಥಿಗಳಿಗೆ ಹಣ್ಣು ಸೇಬುಗಳನು ತಾವು । ಬಹು ಸುಂದರದಿ ಕತ್ತರಿಸಿ ।
ಸುಖವಾಗಿ ಸೇವಿಸಿ ಎಂದೆನುತಿರ್ದರು । ಹಸನ್ಮುಖಿ ಪದುಮಯ್ಯನವರು ॥ ೧೬೭ ॥

ಒಲೆಯೊಳು ಬೆಂಕಿಯು ಹಚ್ಚುವ ಸಮಯದಿ । ಕಲ್ಲಿಗೆ ಕುಟ್ಟುತಲಿರುತಾ ।
ಇರುವೆ ಕ್ರಿಮಿಯು ಹೊರಬಂದ ಮೇಲೆಯೇ । ಒಲೆಗೆ ಬೆಂಕಿಯು ಹಾಕುತಿರ್ದರ್
॥ ೧೬೮ ॥

ಮನೆಗೆ ಬಂದ ಅತಿಥಿಯ ಸೇವೆಯ ಮಾಡುವ । ಕಲೆಯನು ಕಲಿಯಲೇ ಬೇಕು ।
ಪದುಮಯ್ಯಗೌಡರ ನಿತ್ಯಕ್ರಿಯೆಗಳನ್ನು । ಚೆಲುವಿನಿಂ ತಿಳಿಯಲು ಬೇಕು ॥೧೬೯॥

ಜೀಪಿನೊಳ್ ಪ್ರಯಾಣ ಮಾಡುವ ಸಮಯದಿ । ಧರ್ಮದ ಮಾತುಗಳನ್ನು ಬಿಡದೆ ।
ಧಾರ್ಮಿಕ ಪ್ರಶ್ನೆಯ ಕೇಳುವ ಜನರಿಗೆ । ಧರ್ಮತತ್ವವ ಪೇಳುತಿರ್ದರ್ ॥೧೭೦॥

ಪ್ರಯಾಣ ಮಾಡುವ ಸಮಯದಿ ಸತತವು । ಭಾವಪೂಜೆಯನು ಗೈಯುತಲಿ ।
ಜಿನಗೀತೆ ಹಾಡುತ ಜಿನಧ್ಯಾನ ಮಾಡುತ । ಸಮಯಸುಸಮಯ ಮಾಡಿದರು
॥೧೭೧॥

ಪ್ರಯಾಣ ಮಾಡುವ ಸಮಯದಿ ಸುಂದರ । ಹಸ್ತಾಕ್ಷರದಿಂ ಲೆಕ್ಕವನು ।
ಬರೆಯುವ ಕಲೆಯನು ಪದುಮಯ್ಯಗೌಡರು । ಕಲಿತಿದ್ದರು ಶ್ರದ್ಧೆಯಿಂದ ॥೧೭೨॥

ಲೆಕ್ಕವ ಬರೆಯುವ ಸಮಯದಿ ಜನಗಳು । ಧರ್ಮದ ಪ್ರಶ್ನೆಯ ಕೇಳಲ್ ।
ಲೆಕ್ಕಪುಸ್ತಕ ಮುಚ್ಚಿ ಧರ್ಮೋಪದೇಶದಿಂ । ಉತ್ತರವೀಯುತಲಿರ್ದರ್ ॥೧೭೩॥

ಬಾಲಕರಾಗಲಿ ದೊಡ್ಡವರಾಗಲಿ । ಪುರುಷರಾಗಲಿ ಸ್ತ್ರೀಯಾಗಿರಲಿ ।
ಧರ್ಮೋಪದೇಶವು ಬೇಕೆಂದ ತಕ್ಷಣ । ಧರ್ಮವ ಪೇಳುತಲಿರ್ದರ್ ॥೧೭೪॥

ರಾತ್ರಿ ಹಗಲು ಮಧ್ಯರಾತ್ರಿ ಮಧ್ಯಾಹ್ನ । ಸಮಯ ಸಮಯವೆನ್ನಿಸದೆ ।
ಬಂದವರಿಗೆಲ್ಲಾ ಧರ್ಮದ ಮಾತನ್ನು । ಚೆಂದದಿ ಹೇಳುತಲಿರ್ದರ್ ॥೧೭೫॥

ಧರ್ಮಪ್ರಚಾರವ ಮಾಡುತಲಿದ್ದರೂ । ಕೃಷಿಕಾರ್ಯ ತಾವ್ ಮರೆಯಲಿಲ್ಲ ।
ವ್ಯವಹಾರ ನಿಶ್ಚಯ ಧರ್ಮವ ಬಿಡದೆ । ಧರ್ಮವ ಪಾಲಿಸುತಿರ್ದರ್ ॥೧೭೬॥

ಶ್ರೀಗಂಧವೃಕ್ಷವು ಪುದ್ಗಲಸ್ಕಂದವ । ಸುಗಂಧಿಗೈಸುವತೆರದಿ ।
ಪದುಮಯ್ಯಗೌಡರು ಬಳಿಬಂದ ಜನಗಳ । ಧಾರ್ಮಿಕರಾಗಿಸುತಿರ್ದರ್ ॥೧೭೭॥

ನಡೆವಾಗ ನುಡಿವಾಗ ಏಳ್ವಾಗ ಬೀಳ್ವಾಗ । ಬಿಡದೆ ಧರ್ಮವನು ಬೋಧಿಸುತ ।
ಪದುಮಯ್ಯಗೌಡರು ಧರ್ಮಪ್ರಭಾವವ । ಹರುಷದಿಂದಲಿ ಗೈಯ್ಯುತಿರ್ದರ್ ॥೧೭೮॥

ಹಿತ ಮಿತ ಮೃದುವಾಗಿ ಮಧುರ ಮಾತುಗಳಿಂದ । ಧರ್ಮದ ವಚನ ಪೇಳುತಲಿ ।
ಶುಭ ಮನ ವಚನ ಕಾಯದೊಳು ಶ್ರೀ ಪದುಮಯ್ಯ । ಗೌಡರು ಬಾಳುತಲಿರ್ದರ್
॥೧೭೯॥

ಬಿರುದನು ಪಡೆಯದೆ ಪುಸ್ತಕವೋದದೆ । ದಿನವು ಧರ್ಮಚರ್ಚೆಗೈದು ।
ಸುಸಮಾನ ಶಿವಭೂತಿತೆರದೊಳು ಪದುಮಯ್ಯ। ಗೌಡರು ಬಾಳುತಲಿರ್ದರ್ ॥೧೬೦॥

ತಿಳಿದವರೆಡೆಯಲ್ಲಿ ಸ್ವಾಮಿಗಳೆಡೆಯಲ್ಲಿ । ಹಲವರ ಸಮ್ಮುಖದಲ್ಲಿ ।
ಧರ್ಮಚರ್ಚೆಯ ಮಾಡಿ ಶ್ರೀ ಪದುಮಯ್ಯ । ಧರ್ಮವ ಪಾಲಿಸುತಿರ್ದರ್ ॥೧೬೧॥

ಅಷ್ಟಮದಗಳಿಂದ ದೂರದಿಂದಿರುತಲಿ । ಅಷ್ಟಗುಣವ ಪ್ರೀತಿಸುತಲಿ ।
ಶುದ್ಧಸಮ್ಯಕ್ತ್ವ ಸಂಪನ್ನರಾಗಿರುತಿರ್ದರ್ । ಸಮ್ಯಕ್ ಪದುಮಯ್ಯಗೌಡರ್ ॥೧೬೨॥

ಶಾಸನದೇವಿ ಶ್ರೀ ಪದ್ಮಾವತಿಯನು । ತುಂಬು ಹೃದಯದಿ ನಂಬುತಲಿ ।
ಬಂದ ಕಷ್ಟವ ದೇವಿ ಪರಿಹರಿಸುವಳೆಂದು। ಚನ್ನಾಗಿ ಪೇಳುತ್ತಲಿರ್ದರ್ ॥೧೬೩॥

ಯಾವುದೇ ಸಮಸ್ಯೆ ಬಂದರು ಶ್ರೀ ಪದು । ಮಾವತಿಯರ್ಚನೆಗೈದು ।
ಪುಷ್ಪವ ತೆಗೆದು ಸಂಶಯವ ನಿವಾರಿಸಿ। ಸನ್ಮಾರ್ಗದಿ ನಡೆಯುತಿರ್ದರ್ ॥೧೬೪॥

ದಿನಪೂಜೆಯಿಂದಲಿ ಜಿನಭಕ್ತಿಯಿಂದಲಿ । ದುರಿತವ ಜಯಿಸುತಲಿರ್ದರ್ ।
ಪಂಚಣಮೋಕ್ಕಾರ ಮಂತ್ರದಿ ದೃಢವಾದ। ವಿಶ್ವಾಸವಿರಿಸಿಕೊಂಡಿರ್ದರ್ ॥೧೬೫॥

ಬೇಟೆಯಾಡಲಿಕ್ಕೆ ಬೇಡರು ಹೋಗಲು । ಪದುಮಯ್ಯನವರು ತಾವ್ ಕಂಡು ।
ಅಲ್ಲೇ ಕಲ್ಲಿನ ಮೇಲೆ ಕುಳಿತು ಪಂಚಮಂತ್ರ । ದಯಾಪೂರ್ಣರಾಗಿ ಜಪಿಸಲು ॥೧೬೬॥

ಎಲ್ಲಿಲ್ಲದ ಮಳೆ ಬಂದಿತು ಗೌಡರ। ಪಂಚಮಂತ್ರ ಜಪದಿಂದ ।
ಪ್ರಾಣಿಗಳ್ ರಕ್ಷಣೆಯಾಯಿತು ಶ್ರೀ ಪಂಚ। ಮಂತ್ರದ ಪ್ರಭಾವದಿಂದ ।೧೬೭॥

ಅತಿಪ್ರೀತಿಯಿಂದಲಿ ಭಕ್ತಾಮರವನು । ಸತತವು ಸ್ತುತಿಸುತಲಿರ್ದರ್ ।
"ಮತ್ತದ್ವಿಪೇಂದ್ರ ಮೃಗರಾಜ" ಶ್ಲೋಕದಿ । ವಿಶ್ವಾಸವಿರಿಸಿಕೊಂಡಿರ್ದರ್ ॥೧೬೮॥

ಭಯ ಭೀತಿ ಸಂಕಷ್ಟ ಬಂದರು ಸತತ। ಪಂಚಣಮೋಕಾರಮಂತ್ರ।
ಸ್ಮರಿಸಲು ಪೇಳುತಲಿರ್ದರು ಪದುಮಯ್ಯ। ಗೌಡರು ವಿಶ್ವಾಸದಿಂದ ।೧೬೯॥

ಶ್ರೀ ನೇಮಿಸಾಗರವರ್ಣೀಜಿಯವರನು । ಸದಾಕಾಲ ತಾವು ಸ್ಮರಿಸುತ ।
ವರ್ಣೀಜಿಯವರಿಂದ ಧರ್ಮಮಹತ್ವವ । ನಾವಾರಿತೆವೆನ್ನುತಿರ್ದರ್ ॥೧೭೦॥

ವರ್ಣೀಜಿಯವರಿಲ್ಲದಿರ್ದೊಡೆ ಧರ್ಮವು । ವೈನಾಡಿನೊಳು ಉಳಿಯುತ್ತಿತ್ತೇ ?
ಮರೆಮಲಾರೆವು ನಾವು ವರ್ಣೀಜಿಯವರ। ಮಹದುಪಕಾರವನೆಂದೆಂದು ॥೧೭೧॥

ಶಾಂತಿರಾಜಶಾಸ್ತ್ರಿ ಧರ್ಮಸೇವೆಯ। ಅನುಗಾಲವೂ ತಾವು ಸ್ಮರಿಸಿ।
ಭಾವಭಕುತಿಯಿಂದ ಸ್ಮರಿಸುತಲಿರ್ದರು। ಶ್ರೀ ಶಾಸ್ತ್ರಿಗಳ ಸೇವೆಯನ್ನು ॥೯೨॥

ಪೊಂಬುಜ ಗುರುಗಳು ಅರ್ಹದ್ದಾಸರು। ಎಂದು ಸಂಭೋಧಿಸುತಿರುತಾ।
ಧರ್ಮೋಪದೇಶದ ವೈಖರಿಯನು ಅರ್ಹ। ದ್ದಾಸರಿಂ ಕಲಿಯಬೇಕೆಂದು ॥೯೩॥

ಧರ್ಮಸ್ಥಳದ ಶ್ರೀ ಮಂಜಯ್ಯಹೆಗ್ಗಡೆ। ಯವರನು ಆಗಾಗ್ಗೆ ಸ್ಮರಿಸಿ।
ಧರ್ಮಾತ್ಮರ ಸ್ಮರಣೆಯು ನಮ್ಮಯ। ಕರ್ತವ್ಯವೆನ್ನುತಲಿರ್ದರ್ ॥೯೪॥

ಯಾವುದೇ ತೊಂದರೆ ಪರಿಹಾರಕ್ಕೋಸುಗ। ಮಂತ್ರಪುಷ್ಪವ ಗೈಯುತಿರ್ದರ್।
ಜನರಿಗೆ ಪುಷ್ಪವ ನರ್ಪಿಸಲು ಕಷ್ಟ। ಪರಿಹಾರವೆನ್ನುತಲಿರ್ದರ್ ॥೯೫॥

ಧರ್ಮಧರ್ಮವೆಂದು ಪೇಳುತ ಪದುಮಯ್ಯ। ಧರ್ಮದ ಶ್ರೀ ಕೃಪೆಯಿಂದ।
ದೊಡ್ಡವನಾದೆನು ಧರ್ಮವ ನಂಬಿ ನಾನೆನ್ನುತಲಿರ್ದರು ಸತತ ॥೯೬॥

## ಪೊಂಬುಜಕ್ಷೇತ್ರ ಸೇವೆ

ಕಾಲವುಹಿಮೆಯಿಂದ ಜಿನದತ್ತರಾಯನು। ನಿರ್ಮಿಸಿದ ಹೊಂಬುಜವು।
ಜೀರ್ಣಸ್ಥಿತಿಗೆ ಬರಲ್ ಪದುಮಯ್ಯಗೌಡರು। ನೊಂದರು ಬಹುದುಃಖದಿಂದ ॥೯೭॥

ದಾನವೀರರಾದ ಶ್ರೀ ಜಿನಚಂದ್ರರ್ಗೆ। ತುಂಬು ಹೃದಯದಿ ಪೇಳಿದರು।
ಪೊಂಬುಜ ಕ್ಷೇತ್ರದ ಜೀರ್ಣೋದ್ಧಾರವ ಗೈಯ್ಯ। ಕಾರ್ಯವ ನೀನಡೆಸೆಂದು ॥೯೮॥

ಶ್ರೀ ಜಿನಚಂದ್ರರು ಪೊಂಬುಜ ಕ್ಷೇತ್ರವ। ಸುಂದರದಿ ನವೀಕರಿಸಿ।
ಪಂಚಕಲ್ಯಾಣವ ವೈಭವದಿಂ ಗೈಸಿ। ಉತ್ತಮ ಪುಣ್ಯ ಗಳಿಸಿದರ್ ॥೯೯॥

ಶ್ರೀ ಜಿನಚಂದ್ರರು ಪದುಮಯ್ಯಗೌಡರಂ। ತುಂಬು ಮನದಿ ಶ್ಲಾಘಿಸುತ।
ಪೊಂಬುಜಕ್ಷೇತ್ರವ ಚೆಂದದಿ ನಿರ್ಮಿಸಲ್। ಪದುಮಯ್ಯ ಕಾರಣರೆಂದರ್ ॥೧೦೦॥

ಜಗದ್ಗುರು ಶ್ರೀ ದೇವೇಂದ್ರ ಕೀರ್ತಿಗಳು। ಪದುಮಯ್ಯನವರ ಕೊಂಡಾಡಿ।
ಧರ್ಮಕಾರ್ಯಕೆ ಪ್ರೇರಣೆಯ ನೀಡುವ ನೀವು। ಚೆನ್ನಾಗಿ ಬಾಳುವಿರೆಂದರ್ ॥೧೦೧॥

ಶ್ರೀ ದೇವೇಂದ್ರಕೀರ್ತಿಗಳು ಪದುಮಯ್ಯಗೌಡರ್ಗೆ। ಸಂತೋಷದಿಂದಾಶೀರ್ವದಿಸಿ।
ಪದುಮಯ್ಯ ಬೇರಲ್ಲ ಧರ್ಮ ಬೇರೆಯಲ್ಲ। ವೆಂದು ಸತತ ಪೇಳುತಿರ್ದರ್ ॥೧೦೨॥

## ಅಷ್ಟಗ್ರಹ ಸಮಾಯೋಗದಲ್ಲಿ ಶ್ರವಣಬೆಳಗೊಳದಲ್ಲಿ ಪದ್ಮಯ್ಯನವರ ಸೇವೆ

ಸಾವಿರದೊಂಬೈನೂರರವತ್ತೊಂ। ದರ ಆಗಸ್ಟ್ ಮಾಸದಂದು ।
ಶ್ರಮಣರನಾದ ಶ್ರವಣಬೆಳ್ಗುಳದೊಳು । ಲೋಕಶಾಂತಿ ಯಜ್ಞ ನಡೆಯಲ್ ॥೨೦೩॥

ಅಷ್ಟಗ್ರಹ ಸಮಾಯೋಗವು ಸೇರಲು । ಕಷ್ಟವಹುದು ಜಗಕೆಲ್ಲಾ ।
ಶಾಂತಿಯಜ್ಞವು ಬೇಕೆಂದು ನಿಶ್ಚಯಿಸಿದರ್ । ಅಂದಿನ ಚಾರುಕೀರ್ತಿಗಳು ।೨೦೪॥

ಪದುಮಯ್ಯಗೌಡರು ಲೋಕಪಾಲಶಾಸ್ತ್ರಿಗಳನು ಜೊತೆಗೆ ಕರೆದೊಯ್ದು ।
ಸಂತೋಷದಿಂದಲಿ ಸಹಕಾರ ನೀಡಿದರ್ । ಲೋಕಶಾಂತಿಗೆ ಪ್ರಾರ್ಥಿಸಿದರು ॥ ೨೦೫ ॥

ಯಜ್ಞದ ಸಮಯದಿ ಪೊಂಬುಜ ಗುರುಗಳು । ಸಂತೋಷದಿಂ ಭಾಗವಹಿಸಿ ।
ಶಾಂತಿಯು ಕಾಣುವ ಧರ್ಮವ ಪೇಳಿದರ್ । ಸಭೆಯನು ಆಶೀರ್ವದಿಸಿದರ್ ॥೨೦೬॥

ಒಂಭತ್ತು ದಿನಗಳ ಕಾಲ ಪರಿಯಂತರ । ಸಂದ ಶ್ರೀ ಶಾಂತಿ ಯಜ್ಞದೊಳು ।
ಪದುಮಯ್ಯಗೌಡರು ಧರ್ಮ ಭಾಷಣಗೈದು । ಧರ್ಮಪ್ರಭಾವನೆಗೈಯ್ದರ್ ।೨೦೭॥

ನಿಂತಲ್ಲಿ ಕುಳಿತಲ್ಲಿ ಭೋಜನದೆಡೆಯಲ್ಲಿ ಧರ್ಮ ಧರ್ಮವೆಂದೆನುತ ।
ಶ್ರವಣಬೆಳ್ಗುಳದೊಳು ಪದುಮಯ್ಯಗೌಡರು । ಧರ್ಮದ ಹೊಳೆ ಹರಿಸಿದರು ॥೨೦೮॥

ಶ್ರೀ ಪೂಜ್ಯಪಾದರ ತಪೋಭೂಮಿಯಾಗಿಹ । ಕನಕಗಿರಿ ಕ್ಷೇತ್ರದೊಳು ।
ವಾರ್ಷಿಕಪೂಜೆಯು ಸಮಯದಿ ತಪ್ಪದೆ । ಧರ್ಮವ ಪೇಳುತಲಿರ್ದರ್ ॥ ೨೦೯ ॥

ಶ್ರೀ ಪಾರ್ಶ್ವನಾಥರ ಯಕ್ಷಿ ಪದ್ಮಾವತಿ । ಯಮ್ಮನ ಅತಿಶಯ ಕ್ಷೇತ್ರ ।
ಶ್ರೀ ಕನಕಗಿರಿ ಸರ್ವಜನಂಗಳ । ಅಭೀಷ್ಟ ಫಲವೀವ ಕ್ಷೇತ್ರ ॥ ೨೧೦ ॥

ಮಲೆಯೂರು ಕನಕಗಿರಿ ಯೆಂಬೆಸರಿನ । ಅತಿಶಯ ಕ್ಷೇತ್ರವಾಗಿಹುದು ।
ನಾಗಾರ್ಜುನ ಬೆಟ್ಟವೆಂದೆಂಬ ಹೆಸರಿಂ । ಕಂಗೊಳಿಸುವುದು ತಾನಿಂದು ॥ ೨೧೧ ॥



## ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ಧರ್ಮ ಪ್ರಭಾವನೆ

ಪರ ಊರಿನೊಳು ಧರ್ಮಪ್ರಭಾವನೆ ಗೈಯಲು । ಪದುಮಯ್ಯನವರು ನಿಶ್ಚಯಿಸಿ ।
ಶ್ರೀ ಲೋಕಪಾಲಶಾಸ್ತ್ರಿಗಳ ಸಹಿತ ಬಂದು । ಧರ್ಮಪ್ರಚಾರವ ಗೈದರ್ ॥ ೨೧೨ ॥

ಪುನ್ನಾಡು ಹೊನ್ನಾಡು ನಾಮದಿಂ ಬೆಳಗಿದ । ಹೆಗ್ಗಡದೇವನಕೋಟೆ ।
ತಾಲ್ಲೂಕಿನೊಳಗಿಹ ಗ್ರಾಮಗಳ ಸುತ್ತಿ । ಜಿನನುಪದೇಶವ ಗೈದರ್ ॥ ೨೧೩ ॥

ಶ್ರೀ ಭದ್ರಬಾಹು ಮುನಿಗಳ ಕಾಲದಿಂ । ಉತ್ತಮ ಜಿನಧರ್ಮದಿಂದ ।
ಬಾಳಿಬದುಕಿದಂತ ಜಿನಧರ್ಮೀಯರ । ನಾಡು ಪುನ್ನಾಡು ಹೊನ್ನಾಡು ॥ ೨೧೪ ॥

ಪುನ್ನಾಡು ರಾಜಧಾನಿಯಾಗಿ ಮೆರೆದ ಶ್ರೀ । ಕೀರ್ತಿಪುರವೆ ಕಿತ್ತೂರು ।
ಇಂದು ಕುಗ್ರಾಮವಾಗಿ ತಾನು ನಿಂತಿದೆ । ಕೋಟೆಯ ತಾಲ್ಲೂಕಿನೊಳಗೆ ॥ ೨೧೫ ॥

ಹೆಗ್ಗಡದೇವನ ಕಾಲದಿ ಶ್ರೀ ಜಿನ । ಧರ್ಮೀಯರ ನಾಡಾಗಿದ್ದ ।
ಪುನ್ನಾಡು ರಾಜ್ಯವು ಜಿನಧರ್ಮಿಯರ ಕೈಬಿಟ್ಟು । ಅನ್ಯಧರ್ಮವ ಕೈ ಹಿಡಿದರ್
॥ ೨೧೬ ॥

ಬಿಟ್ಟಿದೇವನು ವೈಷ್ಣವನಾಗಲು । ಜೈನರು ವೈಷ್ಣವರಾದರ್ ।
ರಾಮಾನುಜಾಚಾರ್ಯರ ಕಾಲದ ವೈಷ್ಣವ ನಾಮವ ತಾವ್ ಧರಿಸಿದರು ॥ ೨೧೭ ॥

ವೈಷ್ಣವ ನಾಮವ ಧರಿಸಿದ ಜೈನರು । ನಾಮಧಾರೀ ಜೈನರೆನಿಸಿ ।
ಗೌಡಾಳಿಕೆಯಿಂದ ನಾಮಧಾರಿಗೌಡ । ರೆಂದೆಂಬ ಹೆಸರು ಪಡೆದರು ॥ ೨೧೮ ॥

ಜಾತಿಯ ಬಿಟ್ಟರು ನೀತಿಯ ಬಿಡಲಿಲ್ಲ । ನಾಮಧಾರಿ ಗೌಡ ಜೈನರ್ ।
ರಾತ್ರಿಯ ಭೋಜನ ಮಾಡುತ್ತಿದ್ದರು ಸಹ । ಪಂಚಮಂತ್ರವ ಮರೆಯಲಿಲ್ಲ ॥ ೨೧೯ ॥

ಗಂಧವ ಹಾಕುವ ಕ್ರಮವನ್ನು ಬಿಡಲಿಲ್ಲ । ಜೈನರೆಂಬುದ ಮರೆಯಲಿಲ್ಲ ।
ನಾಮಜೈನತ್ವವ ನುಳಿಸಿಕೊಂಡರು ತಾವು । ಸ್ಥಾಪನಾ ಜೈನತ್ವ ಮರೆತರ್ ॥ ೨೨೦ ॥

ಅಷ್ಟಮೂಲ ಗುಣ ಮರೆಯದಿರ್ದರು ಸಹ । ಜೈನ ತತ್ವವನೆಲ್ಲ ಮರೆತರ್ ।
ಜನಿವಾರವಿಲ್ಲದ ಜೈನರಾಗಿರ್ದರು । ಹಲವಾರು ವರುಷ ಕಾಲದೊಳು ॥ ೨೨೧ ॥

ಜಿನತತ್ವ ಮರೆತು ಜೈನರೆಂದೇಳುವ । ಪುನ್ನಾಡು ಜನರನ್ನು ಕಂಡು ।
ಪದುಮಯ್ಯಗೌಡರ ಹೃದಯವು ಕರಗಿತು । ಜಿನಧರ್ಮಿ ವಾತ್ಸಲ್ಯದಿಂದ ॥ ೨೨೨ ॥

ದಾನವೀರ ಜಿನಚಂದ್ರರು ಪಡುಕರು । ಚಿಕ್ಕೂರು ಸುಬ್ಬಣ್ಣನವರು।
ಶ್ರೀ ಪದುಮಯ್ಯಗೌಡರ ಜೊತೆ ತಿರುಗಿ। ಧರ್ಮಪ್ರಚಾರ ಗೈಸಿದರು । ೨೨೩ ॥

ನಯ ನಯವಾಗಿ ಶ್ರೀ ಲೋಕಪಾಲ। ಶಾಸ್ತ್ರಿಗಳವರು ಉತ್ಸಾಹದಿಂದ।
ಜಿನಧರ್ಮ ಪಾಲನೆ ಸರಳವಾಗಿದೆಯೆಂದು। ಜನರನು ಜೈನರಾಗಿಸಿದರ್ ॥ ೨೨೪ ॥

ಧರ್ಮಜಾಗೃತವಾಗಿ ಸರ್ವಜನಂಗೆ । ಜೈನರೆಂಬುದ ಜ್ಞಾಪಿಸಿದರು ।
ಶ್ರೀ ಜಿನಧರ್ಮವ ಪುನರಂಗೀಕರಿಸುತ । ಜನಿವಾರದಿಂ ಶ್ರೇಷ್ಠರಾದರ್ ॥ ೨೨೫ ॥

ಚಿಕ್ಕೂರು ಕಾಳೀಹುಂಡಿ ಕೊಲ್ಯ ಗ್ರಾಮದಿ। ಧರ್ಮ ಪ್ರೇಮದಿ ಸಂಚರಿಸಿ।
ಜಿನಧರ್ಮ ಪುನರ್‌ಸ್ಥಾಪನೆಗೈದು । ಪದುಮಯ್ಯನವರು ಶೋಭಿಸಿದರ್ ॥ ೨೨೬ ॥

ಗುಜ್ಜಪ್ಪನಹುಂಡಿ ಹೀರೇಹಳ್ಳಿ ನರಸೀ । ಪುರದೊಳು ತಾವು ಸಂಚರಿಸಿ।
ಜಿನಧರ್ಮವ ಸುಲಭದಿ ಬೋಧಿಸಿ। ಧರ್ಮಜಾಗೃತರಾಗಿಸಿದರು ।೨೨೭ ॥

ಶ್ರೀ ಲೋಕಪಾಲಶಾಸ್ತ್ರಿಗಳನು ಕಳುಹಿಸಿ । ಜಿನಪೂಜೆಯ ಕಲಿಸಿ ।
ಪುನ್ನಾಡ ನಾಮಧಾರಿ ಗೌಡರೆಲ್ಲರು । ಜೈನರೆಂಬುದ ಸ್ಥಾಪಿಸಿದರು ॥ ೨೨೮ ॥

ಮಹದುಪಕಾರವ ಮಾಡಿದ ಪದುಮಯ್ಯ । ಗೌಡರ ನೆನೆಯಲು ಬೇಕು ।
ಪಂಚಣಮೋಕ್ಕಾರ ಮಂತ್ರವ ಬಿತ್ತಿದ । ಮಹಾತ್ಮನ ಸ್ಮರಿಸಬೇಕು ।೨೨೯ ॥

ಸ್ವಾತಂತ್ರ್ಯಯೋಧ ಪರಿಪಕ್ವ ರಾಜ। ಕಾರಣಿಯಾಗಿ ಸತ್ಯ ಧರ್ಮಗಳಿಂ ।
ತಾಲ್ಲೂಕಿನ ಪ್ರಥಮಾಧ್ಯಕ್ಷರಾಗಿಯೂ । ಸುಬ್ಬಣ್ಣನವರು ಮೆರೆದರು ॥ ೨೩೦ ॥

ರಾಜಕಾರಣಿಯಾಗಿ ಪದುಮಯ್ಯಗೌಡರ। ಧರ್ಮ ಪ್ರಚಾರದಿ ನಿಂದು ।
ಸುಬ್ಬಣ್ಣನವರು ಪ್ರಖ್ಯಾತರಾದರು । ಧರ್ಮವ ನಾಶ್ರಯಿಸಿದರು ॥ ೨೩೧ ॥

ಶ್ರೀ ಜಿನಚಂದ್ರರು ಮುರ್ನಾಡು ಶ್ರೀ। ವರ್ಧಮಾನ ಹೆಗ್ಗಡೆಯವರ ಕರಿಸಿ ।
ಜಿನಭಜನೆಗಳನು ಕಲಿಸುವ ಮೂಲಕ। ಜಿನಧರ್ಮವನು ಬೆಳಗಿಸಿದರ್ ॥ ೨೩೨ ॥

ಸಾಂಗತ್ಯ ಬರೆಯುವ ಈ ಲೇಖಕನು ಸಹ। ಜಿನಭಜನೆಗಳನ್ನು ಕಲಿತು ।
ಮೂರ್ನಾಡು ವರ್ಧಮಾನ ಹೆಗ್ಗಡೆಯವರ। ಶಿಷ್ಯನಾಗಿ ನಿಂತು ಕಲಿತ ॥ ೨೩೩ ॥

ಪದುಮಯ್ಯಗೌಡರು ಧರ್ಮೋಪದೇಶದ। ಕಾರ್ಯ ವೈಖರಿಯ ತಿಳಿಯಿರಿ ।
ಭಾವಪೂಜೆ ದ್ರವ್ಯಪೂಜೆಯ ಮಾಡುವ। ಮರ್ಮವ ನಿತ್ಯ ಕಲಿಯಿರಿ ॥ ೨೩೪ ॥

ಭಗವಂತನ ಮುಂದೆ ಕುಳಿತು ಮಾಡುವ ಸ್ತುತಿ। ಸ್ತೋತ್ರ ಜಪ ಧ್ಯಾನವೆಲ್ಲ।
ಭಾವಪೂಜೆಯೆಂದು ನೀವೆಲ್ಲ ನಂಬಿರಿ। ನಂಬಿಕೆಯಂತೆ ನಡೆಯಿರಿ ॥ ೨೩೫ ॥

ಅಷ್ಟವಿಧಾರ್ಚನ ಪೂಜಾದ್ರವ್ಯಗಳಿಂದ ಮಾಡುವುದೇ ದ್ರವ್ಯಪೂಜೆ।
ನಿತ್ಯವು ಅಷ್ಟವಿಧಾರ್ಚನೆ ಮಾಡಲು। ದಾರಿದ್ರ್ಯ ದುಃಖ ಹೋಗುವುದು। ॥೨೩೬॥

ಅಷ್ಟವಿಧಾರ್ಚನ ಪೂಜೆಯ ಮಾಡುವ। ಜನರಿಗೆ ಕಷ್ಟ ತಾನಿಲ್ಲ।
ನಿತ್ಯವು ದ್ರವ್ಯಪೂಜೆಯ ಮಾಳ್ಪ ಜನರಿಗೆ। ದುಃಖದಾರಿದ್ರ್ಯ ತಾನಿಲ್ಲ ॥ ೨೩೭ ॥

ಸಾವಿರದೊಂಬೈನೂರ ತೊಂಬತ್ತೈದು। ಮೇ ಮಾಸ ಇಪ್ಪತ್ತೇಳರೊಳು।
ಚಕ್ಕೂರು ಶ್ರೀ ಚಂದ್ರಪ್ರಭ ಜಿನದೇವನ। ವಿಗ್ರಹ ಪ್ರತಿಷ್ಠೆಯಾಯ್ತು ॥ ೨೩೮ ॥

ಪೊಂಬುಜ ಶ್ರೀಮಠ ಸ್ವಸ್ತಿಶ್ರೀ ಜಗದ್ಗುರು। ದೇವೇಂದ್ರಕೀರ್ತಿ ಗುರುಗಳ।
ಘನ ಉಪಸ್ಥಿತಿಯೊಳು ವೈಭವದಿಂದಲಿ। ಜಿನೇಂದ್ರ ಪ್ರತಿಷ್ಠೆಯಾಯ್ತು ॥ ೨೩೯ ॥

ಪೊಂಬುಜ ಗುರುಗಳ ವಿಶೇಷ ದಾನದಿಂ। ಬಸದಿಯು ನಿರ್ಮಾಣವಾಯ್ತು।
ಕರ್ನಾಟಕೇರಳ ರಾಜ್ಯದ ಜನಗಳು। ಸಂತೋಷದಿಂ ದಾನಗೈಯ್ದರ್ ॥ ೨೪೦ ॥

ಶ್ರವಣಬೆಳಗೊಳ ಸಿಂಹನಗದ್ದೆ ಶ್ರೀಗಳು। ಆರ್ಥಿಕ ಸಹಾಯವಿತ್ತರ್।
ಸಂತೋಷದಿಂದಲಿ ಶ್ರೀ ಜಿನಮಂದಿರ। ಕಟ್ಟಲು ಸಹಾಯಗೈದರ್ ॥ ೨೪೧ ॥

## ಧರ್ಮ ಪ್ರಚಾರಕ್ಕೆ ಪುಸ್ತಕ ಪ್ರಕಟಣೆ

"ಸಂಕ್ಷಿಪ್ತ ಜೈನ ನಿತ್ಯಾ ಕ್ರಿಯಾದರ್ಪಣ"। ಪುಸ್ತಕವನು ಪ್ರಕಟಿಸುತ।
ಧಾರ್ಮಿಕ ಚಿಂತನ ಪೂಜಾ ವಿಧಾನವ। ಸ್ವಾಧ್ಯಾಯ ನೀತಿ ತೋರಿದರು ॥ ೨೪೨ ॥

"ಜೈನತತ್ವೋಪದೇಶ" ಗ್ರಂಥ ಪ್ರಕಟಿಸಿ। ಆರು ದ್ರವ್ಯವ ನರಿವಂತೇ।
ಸುಲಭದ ಮಾರ್ಗದಿ ಜಿನತತ್ವ ತಿಳಿಯಲು। ಪರಮೋಪಕಾರವ ಗೈದರ್ ॥ ೨೪೩ ॥

ತೀವ್ರ ಮಂದ ಜ್ಞಾನ ಸೂತ್ರವ ತಿಳಿಸುತ। ಬಾರಿ ಬಾರಿಗೂ ಜ್ಞಾಪಿಸುತ।
ಪ್ರಕೃತಿಸ್ಥಿತ್ಯನು ಭಾಗ ಪ್ರದೇಶ ಬಂಧ। ಕರ್ಮ ವಿಚಾರವ ತಿಳಿಸಿದರ್ ॥ ೨೪೪ ॥



## ಸರಸ್ವತಿ ಕುಮಾರಿಯರಿಂದ ಜಿನಕಥಾ ಧರ್ಮ ಪ್ರಭಾವನೆ

ಜಿನಕಥೆಯಿಂದಲೆ ಧರ್ಮ ಪ್ರಭಾವನೆ। ಅನುವಾಗಿ ನಡೆಯುವುದೆಂದು।
ಪ್ರಥಮಾನುಯೋಗವ ನಾಶ್ರಯಿಸಿದರು। ಸನ್ಮತಿ ಪದುಮಯ್ಯನವರು ॥ ೨೪೫॥

ಮೂಡುಬಿದರೆ ಜಿನಕಥೆಗಾರ್ತಿ ಸರಸ್ವತಿ। ಕುಮಾರಿಯನು ಕರೆತಂದು।
ಜಿನಕಥೆ ಮುಡಿಸಿ ಜಿನಧರ್ಮ ಪೇಳಿಸಿ। ಜಿನಧರ್ಮ ಪ್ರಭಾವಗೈಯ್ದರ್ ॥ ೨೪೬ ॥

ಪೊಂಬುಜ ಪದ್ಮಾವತಿ ಮಾತೆ ಕಥೆಯನು। ಸುಂದರವಾಗಿ ಮಂಡಿಸುತ।
ವನಮಾಲೆ ಕಥೆಯನು ನಯವಾಗಿ ಹೇಳಿಸಿ। ಧರ್ಮಜಾಗೃತಿಯ ಮಾಡಿದರು
॥ ೨೪೭ ॥

ರಾಮಾಯಣ ಕಥೆ ಭರತ ಬಾಹುಬಲಿ। ಜಿನಕಥೆಯನು ಮಂಡಿಸುತ।
ರಾಮಭರತ ಬಾಹುಬಲಿಯಂತೆ ನೀವೆಲ್ಲ। ರಾಗಬೇಕೆಂದು ಹೇಳಿದರು ॥ ೨೪೮ ॥

ತಂದೆ ತಮ್ಮಂದಿರ ಜೊತೆ ಸರಸ್ವತಿ। ಕುಮಾರಿಯು ತಾನು ಬರುತಾ।
ಗ್ರಾಮದ ಜನಗಳ ಜತೆಯಲಿ ಬೆರೆಯುತಾ। ಜಿನಕಥೆಯನು ಮಾಡುತಿರ್ದರ್ ॥ ೨೪೯॥

ಚಿಕ್ಕೂರು ಕಾಳೀಹುಂಡಿ ಕೂಲ್ಯ ಗ್ರಾಮದಿ। ಗುಜ್ಜಪ್ಪನುಂಡಿ ಹಳ್ಳಿಯೊಳು।
ಜಿನಕಥೆಯನು ಮಾಡಿ ಜಿನಮನದೊಳು ಧರ್ಮ। ಜಾಗೃತಿಯನು ಮಾಡಿದರು
॥ ೨೫೦ ॥

ವೈನಾಡಿನೊಳು ಜಿನಕಥೆಯನು ಮಾಡುತ। ಶ್ರೀ ಸರಸ್ವತಿ ಕುಮಾರಿಯರು।
ವೈನಾಡಿನ ಜನಮನ ಸೂರೆಗೊಂಡರು। ಧರ್ಮಪ್ರೀತಿಯ ಮಂಡಿಸಿದರು ॥ ೨೫೧ ॥

## ಗೃಹಪ್ರವೇಶ-ವಿವಾಹ ಸಮಯದಲ್ಲಿ ಧರ್ಮ ಪ್ರಭಾವನೆ-ಪೂಜೆ

ಯಾರದೇ ಮದುವೆಯಾಗಲಿ ಜಿನಧರ್ಮದ। ಉಪದೇಶವನು ಮಾಡುತಿರ್ದರ್।
ನೂತನ ಗೃಹಪ್ರವೇಶದೆಡೆಯಲ್ಲಿ ಜಿನಪೂಜೆ। ತಪ್ಪದೆ ಮಾಡಿಸುತಿರ್ದರ್ ॥ ೨೫೨ ॥

ನಾಮಕರಣವಾಗಲಿ ಶ್ರೀ ಪದುಮಯ್ಯಗೌಡರು। ತಾವಾಗಿ ಬಂದು।
ಜಿನಪೂಜೆ ಮಾಡಿಸಿ ಉಪದೇಶ ಗೈಯಿಸಿ। ಧಾರ್ಮಿಕರಾಗಿಸುತಿರ್ದರ್ ॥ ೨೫೩ ॥

ನೂತನ ವಧುವರರಿಂದ ಜಿನಪೂಜೆ। ಭಕ್ತಿಯಿಂದಲಿ ಮಾಡಿಸುತಾ।
ಜಿನಪೂಜೆಯಿಂದಲಿ ಸಂಸಾರ ಸುಖಮಯ। ವಾಗುವುದೆಂದೇಳುತಿರ್ದರ್ ॥ ೨೫೪ ॥

ಅಷ್ಟವಿಧಾರ್ಚನ ಪೂಜೆಯ ಮಾಡಿಸಿ। ಭಕ್ತಿಯಿಂ ವಧುವರರಿಂದ।
ಸಪ್ತವ್ಯಸನವನುಬಿಟ್ಟು ನೀವ್ ಧರ್ಮದಿ। ಬಾಳಿರೆಂದೇಳುತಲಿರ್ದರ್ ॥ ೨೫೫ ॥

ಎಲ್ಲಿ ಹೋದರು ಜಿನಧರ್ಮಪ್ರಚಾರದ। ಜಿನಪೂಜೆ ಗೈಸುವ ಚಿಂತೆ।
ಭಾವಪೂಜೆ ದ್ರವ್ಯಪೂಜೆಯ ಮಾಳ್ಪದಿ। ಹೇಳುವುದೇ ನಿತ್ಯ ಚಿಂತೆ ॥ ೨೫೬ ॥

ಪದುಮಯ್ಯಗೌಡರ ಜತೆಯಲಿ ವಾಹನ। ದೊಳು ಜನ ಸಂಚರಿಸುತಿರಲ್।
ಧರ್ಮವಿಚಾರವು ಕರ್ಮ ಸಿದ್ಧಾಂತವು। ಬಿಡದೆ ತಾವ್ ಹೇಳುತಲಿರ್ದರ್ ॥ ೨೫೭ ॥

ಶುಭ ಭಾವ ಮಾಡುವ ಶುಭ ಕಾರ್ಯ ಗೈಯ್ಯುವ। ಶುಭ ವಿಚಾರವ ಚಿಂತಿಸುವ।
ತನುಮನವ ಚನದಿಂ ಶುಭ ಯೋಗ ಗೈಯ್ಯುವ। ತತ್ವವ ತಿಳಿಸುತಲಿರ್ದರ್ ॥ ೨೫೮ ॥

ನಾಮಕರಣ ವಿವಾಹ ಗೃಹಪ್ರವೇಶ। ವ್ಯವಹಾರ ಶುಭ ಕಾರ್ಯದೊಳು।
ಪದುಮಯ್ಯಗೌಡರು ತಪ್ಪದೆ ಬರುತಿರ್ದರ್। ಧರ್ಮವ ಪೇಳುತಲಿರ್ದರ್ ॥ ೨೫೯ ॥

ಸರಳವಾಗಿ ವಿವಾಹಕಾರ್ಯ ಮಾಡಿರಿ। ಸರಳತೆಯಿಂದ ಜೀವಿಸಿರಿ।
ಸರಳತೆಯಿಂದಲಿ ಸುಖಶಾಂತಿ ಸಿಗುವುದು। ಪದುಮಯ್ಯನವರ ಉಪದೇಶ ॥ ೨೬೦ ॥

## ಚಕ್ಕೂರಿನಲ್ಲಿ ಧರ್ಮಪ್ರಭಾವನಾ ಫಲ

ಚಕ್ಕೂರಿನೊಳು ಆದರ್ಶ ಶ್ರಾವಕರೆಂದು। ಇರುವ ಶ್ರೀ ಅಪ್ಪಣ್ಣೇಗೌಡರ್।
ಪದುಮಯ್ಯಗೌಡರ ಧರ್ಮೋಪದೇಶದಿಂ। ಜಿನಭಕ್ತರಾಗಿ ಬಾಳುತಿಹರ್ ॥ ೨೬೧ ॥

ಅಪ್ಪಣ್ಣೇಗೌಡರು ಜಿನಧರ್ಮದುಪದೇಶ। ದಿಂದ ಪ್ರಭಾವಿತರಾದರು।
ಪದುಮಯ್ಯನವರ ಧರ್ಮದ ಮಾತುಗಳಿಂದ। ಜಿನಧರ್ಮ ಮಹಿಮೆಯ ನರಿತರ್ ॥ ೨೬೨ ॥

ಅಪ್ಪಣ್ಣೇಗೌಡರ ಮಕ್ಕಳು ಶ್ರೀ ಜಿನ। ಧರ್ಮವನವಲಂಬಿಸಿದರು।
ಪದುಮಯ್ಯನವರ ಪರಮೋಕಾರವ। ಎಂದೆಂದೂ ಸ್ಮರಿಸುತಲಿಹರು ॥ ೨೬೩ ॥

ಕೂಲ್ಯದ ಪಟೇಲ ನಾಗಪ್ಪನವರು। ಪದುಮಯ್ಯಗೌಡರನೊಡಗೂಡಿ।
ಧರ್ಮಪ್ರಚಾರವ ಮಾಡಿಸಿದರು ಜಿನ। ಧರ್ಮದಿಂ ತಾವ್ ಬಾಳುತಿಹರು ॥ ೨೬೪ ॥

ಗುಜ್ಜಪ್ಪನಹುಂಡಿ ಪಟೇಲರು ಶ್ರೀ। ಬಸಪ್ಪನವರು ಪ್ರೀತಿಯಿಂದ।
ಪದುಮಯ್ಯನವರ ಜತೆಗೂಡಿ ಜಿನಧರ್ಮ। ಪ್ರಭಾವನೆಯ ಮಾಡಿಸಿದರು ॥ ೨೬೫ ॥

ಕಾಳೀಹುಂಡಿಯ ವೈಸ್‌ಛೇರ್ಮನ್ । ಸುಬ್ಬಣ್ಣ ಜೈನರೆಂಬಭಿಮಾನದಿಂದ ।
ಪದುಮಯ್ಯಗೌಡರ ಜತೆಯಲಿ ತಿರುಗುತಾ । ಜನರನು ಜೈನರಾಗಿಸಿದರ್ ॥ ೨೬೬ ॥

ಧರ್ಮಪ್ರಭಾವನಾ ಫಲವಾಗಿ ಶ್ರೀ । ಜಿನಮಂದಿರ ತಾನುದ್ಭವಿಸಿ ।
ಚಕ್ಕೂರಿನೊಳು ನಿಂತಿರುವುದು ಪದುಮಯ್ಯ । ಗೌಡರ ಉಪದೇಶದಿಂದ ॥ ೨೬೭ ॥

ಚಕ್ಕೂರು ಕಾಳೀಹುಂಡಿ ಕೂಲ್ಯ ಅಡಹಳ್ಳಿ ಗುಜ್ಜಪ್ಪನಹುಂಡಿ ಬೆಳತೂರು ।
ಗ್ರಾಮಸ್ಥರೊಡಗೂಡಿ ನಿರ್ಮಾಣವಾಗಿಹ । ಶ್ರೀ ಚಂದ್ರಪ್ರಭ ಜಿನನಿಲಯ ॥ ೨೬೮ ॥

ಪೊಂಬುಜ ಜಗದ್ಗುರು ದೇವೇಂದ್ರಕೀರ್ತಿಗಳ್ । ಆಶೀರ್ವದಿಸಿ ಜನರಿಗೆಲ್ಲಾ ।
ನೀವೆಲ್ಲ ಜೈನರು-ಜೈನರು ನೀವೆಲ್ಲ । ಜೈನರಾಗಿ ಬಾಳಿರೆಂದರ್ ॥ ೨೬೯ ॥

ಗುರುಗಳ ಆಶೀರ್ವಾದವು ಸಿಕ್ಕಲು । ಜನಕೆಲ್ಲ ಸಂತೋಷವಾಯ್ತು ।
ಇದಕೆಲ್ಲ ಪದುಮಯ್ಯನವರೇ ಕಾರಣರೆಂದು । ಹರುಷದಿಂ ಜನರು ಪೊಗಳಿದರ್ ॥ ೨೭೦ ॥

ಪುನ್ನಾಡು ಜನರೆಲ್ಲ ಪದುಮಯ್ಯಗೌಡರ । ಜಿನಧರ್ಮದುಪದೇಶದಿಂದ ।
ಜಿನಧರ್ಮವನಪ್ಪಿಕೊಂಡರು ದಿನದಿನ । ಜಿನನನು ಪೂಜಿಸುತಿರುವರ್ ॥ ೨೭೧ ॥

## ಧಾರ್ಮಿಕ ಟ್ರಸ್ಟ್‌ಗಳ ಸ್ಥಾಪನೆ

ಧರ್ಮವು ಸ್ಥಿರವಾಗಿ ನಡೆಯಲು ಧಾರ್ಮಿಕ । ಸಂಸ್ಥೆಯಿಂದಲಿ ಸಾಧ್ಯವೆಂದು ।
ಮೂರು ಧರ್ಮಸಂಸ್ಥೆ ಸ್ಥಾಪನೆಗೈದರು । ಧರ್ಮಾತ್ಮ ಪದುಮಯ್ಯನವರು ॥ ೨೭೨ ॥

ಎಂ. ಕೆ. ಎಸ್. ಫ್ಯಾಮಿಲಿ ಜೈನಧರ್ಮೋದ್ಧಾರಕ । ಸಂಸ್ಥೆಯನ್ನು ಸ್ಥಾಪಿಸುತಾ ।
ಧರ್ಮದಿಂ ಬಾಳುವ ಬಡ ವಿದ್ಯಾರ್ಥಿಗಳ । ವಿದ್ಯೆಗೆ ಸಹಾಯಗೈದರ್ ॥ ೨೭೩ ॥

ಮಣಿಯಂಗೂಡು ಕೃಷ್ಣೇಗೌಡರ । ಸುಬ್ಬೇಗೌಡರ ಮನೆತನದೆಸರೊಳ್ ।
ಜೈನಧರ್ಮೋದ್ಧಾರಕ ಸಂಸ್ಥೆ ಸ್ಥಾಪಿಸಿ । ಬಡವರೋದ್ಧಾರವಗೈದರ್ ॥ ೨೭೪ ॥

ಧರ್ಮಪಾಲ ಜೈನಸಂಸ್ಥೆಯ ಸ್ಥಾಪಿಸಿ । ಭೂಮಿಯ ಧರ್ಮಕ್ಕೆ ಬರೆಸಿ ।
ಬಂದ ಉತ್ಪತ್ತಿಯೊಳು ಧರ್ಮಪಾಲನೆ । ಗೈಯ್ಯುವ ಮಾರ್ಗವ ತೋರಿದರು ॥ ೨೭೫ ॥

ಎಂ. ಕೆ. ಎಸ್. ಫ್ಯಾಮಿಲಿ ಜೈನಸಂಸ್ಥೆ ಸ್ಥಾಪಿಸಿ । ಧರ್ಮವು ಸ್ಥಿರವಾಗಿ ನಡೆಯಲ್ ।
ಬಹುಪಾಲು ಭೂಮಿಯ ಬಿಟ್ಟು ಶ್ರೀ ಸಂಸ್ಥೆಗೆ । ಧರ್ಮಪ್ರಭಾವನೆ ಗೈದರ್ ॥ ೨೭೬ ॥

ದೇಹವು ಆತ್ಮನ ದೇವಾಲಯವೆಂದು। ದೇಹದ ಆರೋಗ್ಯ ಸ್ಥಿತಿಗೆ।
ಸ್ಥಾಪನೆಗೈವ ಶ್ರೀ ಧರ್ಮಸಂಸ್ಥೆಗಳಿಂದ। ಧರ್ಮ ಸಹಾಯವ ಗೈದರ್ ॥ ೨೭೭ ॥

ಘನಘೋರ ದಾರಿದ್ರ್ಯದಿಂದಲಿ ಬಳಲುವ। ಧಾರ್ಮಿಕ ಜನಜೀವಿಗಳಿಗೆ।
ಕರುಣೆಯಿಂದಲಿ ದಾನಧರ್ಮವ ಗೈಯುತ। ಘನಖ್ಯಾತಿಯಿಂದ ಬಾಳಿದರು ॥ ೨೭೮ ॥

ಧರ್ಮಪ್ರಭಾವನೆಗೋಸುಗ ತನ್ನ। ಭೂಮಿ ತೋಟಗಳನ್ನು ಬಿಟ್ಟು।
ಧರ್ಮವೇ ತನ್ನ ತನು ಮನ ಧನವೆಂದು। ಧರ್ಮಕೆ ತಾವ್ ಬರೆದಿಹರು ॥ ೨೭೯ ॥

ಬಡ ವಿದ್ಯಾರ್ಥಿಗಳಿಗೆ ಸಹಾಯಗೈಯ್ಯಲು। ಧರ್ಮಸಂಸ್ಥೆಯನು ಸ್ಥಾಪಿಸುತ।
ಜಿನಮಂದಿರಗಳಿಗೆ ಜಿನಧರ್ಮಿಯರಿಗೆ। ಧನಸಹಾಯವ ಗೈಯುತಿರ್ದರ್ ॥ ೨೮೦ ॥

## ಪೂಜಾ ಪ್ರಭಾವನೆಗೆ ಫಿಲಂ ನಿರ್ಮಾಣ

ಅಷ್ಟವಿಧಾರ್ಚನೆ ಪೂಜಾಪ್ರಚಾರವ ಗೈಯ್ಯಲು ಪದುಮಯ್ಯನವರು।
ದ್ರವ್ಯಪೂಜೆಯ ಮಾಡುವ ರೀತಿ ತೋರಲು। ಪೂಜಾಸಿನಿಮಾ ತೆಗೆಸಿದರು ॥ ೨೮೧ ॥

ಮೈಸೂರು ಕೃಷ್ಣಪ್ಪರಿಂದಲಿ ತೆಗೆಸುತಾ। ಎ. ವೀರಭದ್ರಯ್ಯನವರೊಳ್।
ಉತ್ತಮ ನಿರ್ದೇಶನವ ಗೈಸುತ್ತಲೀ। ಪೂಜಾ ಚಿತ್ರವ ತೆಗೆಸಿದರು ॥ ೨೮೨ ॥

ಮೈಸೂರಿನಿಂದಲಿ ಶ್ರೀರಪ್ಪಚಂದ್ರರು। ಚಿತ್ರಕ್ಕೆ ತಾವ್ ಸಹಕರಿಸಿ।
ಸಿಬ್ಬಂದಿಯರ ಕರೆತಂದರು ಭಕ್ತಿಯಿಂ। ಸುಂದರ ಕೂಟ್ಟಮಂಡಕೆ ॥ ೨೮೩ ॥

ಅಷ್ಟವಿಧಾರ್ಚನ ಪೂಜೆಯ ಭಕ್ತಿಯಿಂ। ಮೈಸೂರು ಮಹಿಳೆಯರಿಂದ।
ಹಾಡಿಸಿ ಪದುಮಯ್ಯಗೌಡರು ತಾವೇ। ದ್ರವ್ಯಪೂಜೆಯ ಮಾಡಿ ತೋರ್ದರ್ ॥ ೨೮೪ ॥

ಹಿರಿಯ ಸೊಸೆ ಶ್ರೀಮತಿ ರತ್ನಮ್ಮರು। ಪೂಜೆಗೆ ಸಹಕಾರ ಕೊಡುತಾ।
ಪದ್ಮಾವತಮ್ಮನವರ ಕಳಸವನಿಕ್ಕುತಾ। ಪೂಜೆಗೆ ಅಣಿ ಮಾಡುತಿರ್ದರ್ ॥ ೨೮೫ ॥

ಕಲಶವನಿಕ್ಕುವ ಪರಿಯನು ರತ್ನಮ್ಮ। ನವರಲಿ ನೋಡಲು ಚಂದಾ।
ಕಲಶವ ನಿಕ್ಕಿದಮೇಲೆ ಪದ್ಮಾವತಮ್ಮ ಕುಳಿತಿರುವಳೋ ? ಎಂದಾನಂದ ॥ ೨೮೬ ॥



## ಮೂಕಪ್ರಾಣಿ ಸಂಸ್ಥೆಗೆ ಸಹಾಯ

ಮೂಕ ಪ್ರಾಣಿಗಳನ್ನು ರಕ್ಷಿಸಲಿಕ್ಕಾಗಿ । ಮೈಸೂರು ಮಹಾನಗರದೊಳು ।
ಸ್ಥಾಪಿಸಿರುವ ಶ್ರೀ ಪಿಂಜ್ರಾಪೋಲ್ ಸೊಸೈಟಿ । ಸಂಸ್ಥೆಗೆ ದಾನವ ಗೈದರ್ ।೨೮೭॥

ಹತ್ತ ತಾಯಿಯ ಹಾಲು ಐದು ವರ್ಷಗಳಿಗೆ । ಮತ್ತೆಲ್ಲಾ ಗೋವಿನ ಹಾಲೇ ।
ಕುಡಿದು ಬೆಳೆದು ನಾವು ಗೋಮಾತೆ ಮರೆತೆವು । ಕೃತಘ್ನತತಿ ಬುದ್ಧಿಯಿಂದ ॥೨೮೮॥

ಗೋವಿನ ಹಾಲನ್ನು ಕುಡಿಯದವರಿಲ್ಲ । ಗೋಮಾತೆ ಮಾತೆ ಎಲ್ಲರಿಗೂ ।
ರೂಢೀಯಾಗಿಯೂ ಬಂತು ಗೋಮಾತೆ ಪೂಜಿಸಿ । ವಂದಿಸಿ ಕೃತಜ್ಞರಾಗಿ ।೨೮೯॥

ಇಂತುಪಕಾರವ ಮಾಡುವ ಗೋವನು । ಚಿಂತೆಯಿಲ್ಲದೆ ಕಟುಕರಿಗೆ ।
ಸಂತಸದೊಳು ಮಾರಿ ಸಂತಸ ಪಡುವುದು । ಧರ್ಮವಾಗುವುದೇ ಚಿಂತಿಸಿರಿ ॥ ೨೯೦ ॥

ಇಂಥ ಮೂಕ ಪ್ರಾಣಿಗಳನ್ನು । ರಕ್ಷಿಸುವ ದಯಾಸಂಸ್ಥೆ ।
ಪಿಂಜ್ರಾಪೋಲ್ ಸೊಸೈಟಿ ಸಂಸ್ಥೆಯು ಸುಂದರ । ಮೈಸೂರು ನಗರದೊಳಿಹುದು
॥ ೨೯೧ ॥

ಚಾಮುಂಡಿ ಬೆಟ್ಟದ ಬುಡದಲ್ಲಿ ಶ್ರೀ । ಜಯಚಾಮರಾಜರೊಡೆಯರು ನೀಡಿರುವ ।
ದಾನದ ಸ್ಥಳದಲ್ಲಿ ನಿಂತಿಹುದು ಸಂಸ್ಥೆ । ಮೂಕ ಪ್ರಾಣಿಗಳ ರಕ್ಷಿಸುತಾ ॥ ೨೯೨ ॥

ಸಂಸ್ಥೆಯ ಪಾಲಕರೊಮ್ಮೆ ಶ್ರೀ ಭವ್ಯಾತ್ಮ । ಇಂದ್ರಿಕುಮಾರರ ಕೂಡೇ ।
ಬಂದು ಶ್ರೀ ಪದುಮಯ್ಯಗೌಡರ ಕಂಡರು । ಸಂಸ್ಥೆಯು ವಿವರ ನೀಡಿದರು ॥ ೨೯೩ ॥

ಸಂಸ್ಥೆಯು ವಿಚಾರವೆಲ್ಲವ ಪೇಳಲು । ಸಂತಸಗೊಂಡರು ಗೌಡರ್ ।
ಸಂಸ್ಥೆಗೆ ಭೇಟಿಯನಿತ್ತು ತಾವ್ ಬಂದರು । ಧನಸಹಾಯವನ್ನು ಮಾಡಿದರು ।೨೯೪॥

ಮೂಕ ಪ್ರಾಣಿಯ ಕ್ಷೇಮದ ಸಂಸ್ಥೆ । ಚೆನ್ನಾಗಿ ನಡೆಯಲೆಂದು ಹಾರೈಸಿ ।
ವರ್ಷವರ್ಷವೂ ದಾನಧರ್ಮವ ಮಾಡುವ । ಕಾರ್ಯಕ್ರಮವ ಹಾಕಿಕೊಂಡರ್ ೨೯೫॥

ಅಹಿಂಸಾಧರ್ಮವ ನಂಬಿದ ಜನಗಳು । ಸಂಸ್ಥೆಯು ನೋಡಲು ಬೇಕು ।
ದಾನಧರ್ಮವಗೈದು ಸಂಸ್ಥೆಯು ಬೆಳೆಯಲು । ಉಪಕಾರಗೈಯಲು ಬೇಕು ॥೨೯೬॥



## ಅನಂತಕೃಷ್ಣಪುರಂ ವಿದ್ಯಾರ್ಥಿ ನಿಲಯ

ಮನೆಗೆಂದು ಕಟ್ಟಿದರ್ ಅನಂತಯ್ಯಗೌಡರು । ಭವ್ಯವಾದ ವಾಸಗೃಹವ ।
ವಿದ್ಯಾರ್ಥಿನಿಲಯಕ್ಕೆ ದಾನವಗೈದರು । ಧಾರ್ಮಿಕ ಶ್ರೀ ಪ್ರೇಮದಿಂದ ॥ ೨೯೭ ॥

ಉತ್ತಮ ಭೂಮಿಯ ಕಾಫಿಯ ತೋಟವ । ವಿದ್ಯಾರ್ಥಿ ನಿಲಯಕ್ಕೆ ಕೊಡುತ ।
ಎ. ಕೆ. ಪಿ. ಜೈನ ವಿದ್ಯಾರ್ಥಿ ನಿಲಯವೆಂದು । ನಾಮಕರಣವನು ಗೈದರ್ ॥ ೨೯೮ ॥

ಪದುಮಯ್ಯಗೌಡರು ಕಾರ್ಯದರ್ಶಿಯಾಗಿ । ಧರ್ಮದ ಸೇವೆಯ ಗೈದರ್ ।
ವಿದ್ಯಾರ್ಥಿಗಳ ಯೋಗಕ್ಷೇಮ ವಿಚಾರಿಸಿ । ಧರ್ಮಪ್ರಭಾವನೆ ಗೈಯ್ದರ್ ॥ ೨೯೯ ॥

ಆಗಾಗ್ಗೆ ಬಂದು ವಿದ್ಯಾರ್ಥಿ ಜತೆನಿಂತು । ಸುಖದುಃಖವನು ವಿಚಾರಿಸುತಾ ।
ಹುಡುಗರ ಜತೆಗೂಡಿ ಊಟವ ಮಾಡುತ । ವಿದ್ಯಾರ್ಥಿಗಳ ಮನಸೆಳೆದರ್ ॥ ೩೦೦ ॥

ಶಾಸ್ತ್ರದ ಬೋಧನೆ ಮಾಡುವ ಶ್ರೀಕಾಂತ । ಭುಜಬಲಿ ಶಾಸ್ತ್ರಿಗಳವರೊಳ್ ।
ವಿದ್ಯಾರ್ಥಿ ವಿದ್ಯಾರ್ಥಿನಿಯರ ಕ್ಷೇಮವ । ಖುದ್ದಾಗಿ ತಾವ್ ಕೇಳುತಿರ್ದರ್ ॥ ೩೦೧ ॥

ವಾರಕ್ಕೊಮ್ಮೆಯಾದರೂ ಬಂದು ವಿದ್ಯಾರ್ಥಿ । ವಿದ್ಯಾರ್ಥಿನಿಯರನು ಕಂಡು ।
ಧರ್ಮೋಪದೇಶವ ಗೈಯುತಲಿರ್ದರು । ಧಾರ್ಮಿಕ ಪದುಮಯ್ಯನವರು ॥ ೩೦೨ ॥

ವಿದ್ಯಾರ್ಥಿ ನಿಲಯದ ಪುರೋಭಿವೃದ್ಧಿಗೆ । ಹಗಲುರಾತ್ರಿಯು ಸೇವೆಗೈದು ।
ತನ್ನ ಮಕ್ಕಳಂತೆ ಪರರ ಮಕ್ಕಳು ಎಂದು । ಚೆನ್ನಾಗಿ ತಾವ್ ಪೇಳುತಿರ್ದರ್ ॥ ೩೦೩ ॥

ತನ್ನಯ ಪುತ್ರ ಪುತ್ರಿಯರನ್ನು ವಿದ್ಯಾರ್ಥಿ । ನಿಲಯದಿ ತಾವಿರಿಸಿದರು ।
ಶ್ರೀಮಂತ ಬಡವರೆನ್ನುವ ಭೇದ ಕಾಣದೇ । ಬಾಳಲು ತಾವ್ ಪೇಳುತಿರ್ದರ್ ॥ ೩೦೪ ॥

ಮೈಸೂರಿಂ ಬರುವಾಗ ಸಿಹಿತಿಂಡಿಯನು ತಂದು । ತಾವ್ ನಿಂತು ಹಂಚಿಸುತಿರ್ದರ್ ।
ಪದುಮಯ್ಯಗೌಡರು ಬಂದರೆ ವಿದ್ಯಾರ್ಥಿಗಳಿಗೆ । ಸಿಹಿತಿಂಡಿ ಸಿಗುತಿತ್ತು ॥ ೩೦೫ ॥

ಸಿಹಿತಿಂಡಿ ಜತೆಯಲಿ ಸಿಹಿಯಾದ ಧರ್ಮದ ಮಾತುಗಳನ್ನೂ ಹೇಳುತಲೀ ।
ಸಿಹಿ-ಕಹಿಯನು ಸಮನಾಗಿಯೂ ಕಾಣುವ । ಹಿತವಚನವ ಪೇಳುತಿರ್ದರ್ ॥ ೩೦೬ ॥

ಸರ್ವ ವಿದ್ಯಾರ್ಥಿಗಳಣ್ಣಯ್ಯನೆಂದು । ಪದ್ಮರಾಜಣ್ಣಯ್ಯನವರು ।
ವಿದ್ಯಾರ್ಥಿಗಳ ಸಂತೋಷದ ನುಡಿಯಿಂದ । ಹಿಗ್ಗುತಿರ್ದರು ಮುದದಿಂದ ॥ ೩೦೭ ॥

ವಿದ್ಯಾರ್ಥಿಗಳಿಗುತ್ತಮನು ಆಹಾರವ । ನಿತ್ಯವು ಬಡಿಸಬೇಕೆಂದು ।
ಪದುಮಯ್ಯಗೌಡರು ಪದ್ಮರಾಜಣ್ಣಗೆ । ಬಂದಾಗ ಪೇಳುತಲಿರ್ದರ್ ॥ ೩೦೮ ॥

ಎಲ್ಲರಿಂ "ಅಣ್ಣಯ್ಯ"ರೆಂದೆಂಬ ಹೆಸರಿನಿಂ ಕರೆಯಿಸಿಕೊಳ್ಳುತಲಿರ್ದರ್ ।
ಶ್ರೀ ಪದ್ಮರಾಜಣ್ಣಯ್ಯನವರು ತಾವು । ಎಲ್ಲರ ಜತೆಯೊಳು ಬೆರೆತು ॥ ೩೦೯ ॥

ಧಾರ್ಮಿಕರಾದರು ಶಿಸ್ತಿನಿಂ ಪದುಮಯ್ಯ । ಗೌಡರು ತಾವಿರುತಿರ್ದರ್ ।
ತಪ್ಪು ಮಾಡಿದ ವಿದ್ಯಾರ್ಥಿಗಳೆಲ್ಲರ । ತಪ್ಪದೆ ಶಿಕ್ಷಿಸುತಿರ್ದರ್ ॥ ೩೧೦ ॥

ಏಟನು ಹೊಡೆಯುದೆ ಕೆಟ್ಟದ್ದು ನುಡಿಯುದೆ । ತಪ್ಪುಗೈದವರ ಶಿಕ್ಷಿಸುತಾ ।
ಶಿಕ್ಷೆಯು ಮೋಕ್ಷದ ಮಾರ್ಗವು ಎನ್ನುತ । ಧರ್ಮಶಿಕ್ಷೆಯ ನೀಡುತಿರ್ದರ್ ॥ ೩೧೧ ॥

ತಪ್ಪು ಮಾಡಿದ ತನ್ನ ಮಗನನ್ನು ಪದುಮಯ್ಯ । ನವರು ಹೊರಹಾಕಿದರು ।
ತನ್ನ ಮಗ ಅನ್ಯರ ಮಗ ಬೇರಲ್ಲ । ತಪ್ಪು ತಪ್ಪೇ ಎನ್ನುತಿರ್ದರ್ ॥ ೩೧೨ ॥

ಶ್ರೀಮಂತರಾದರು ತನ್ನ ಪುತ್ರ ಪುತ್ರಿ । ಯರ ವಿದ್ಯಾರ್ಥಿ ನಿಲಯದಿ ।
ಸೇರಿಸಿ ಧಾರ್ಮಿಕ ಶಿಕ್ಷಣ ಕೊಡಿಸಿದರ್ । ಧೀಮಂತ ಪದುಮಯ್ಯನವರು ॥ ೩೧೩ ॥

## ಗುಣಾವತಿ ಅಮ್ಮನವರ ಮಕ್ಕಳ ಸೇವೆ

ಮನೆಗೊಬ್ಬ ಅಜ್ಜಿಯಿದ್ದರೆ ಕ್ಷೇಮವೆಂದೆಂಬ । ಹಿರಿಯರ ನುಡಿಮಾತಿನಂತೆ ।
ಅಂಕ್ಯಮ್ಮನವರು ತಾವ್ ವಿದ್ಯಾರ್ಥಿ । ವಿದ್ಯಾರ್ಥಿನಿಯರ ಕ್ಷೇಮಕ್ಕೆ ನಿಂತರ್ ॥ ೩೧೪ ॥

ವಿದ್ಯಾರ್ಥಿ ವಿದ್ಯಾರ್ಥಿನಿಯರ ಕ್ಷೇಮದ । ಭಾರವ ತಾವ್ ಹೊತ್ತುಕೊಂಡು ।
ತನ್ನ ಮಕ್ಕಳಂತೆ ಮಕ್ಕಳ ಕ್ಷೇಮವ । ಕಾರ್ಯರೂಪದಿ ತೋರುತಿರ್ದರ್ ॥ ೩೧೫ ॥

ವಾರಕ್ಕೊಮ್ಮೆ ವಿದ್ಯಾರ್ಥಿಗಳಿಗೆ । ಭೃಂಗ ಸ್ನಾನವ ಗೈಯಿಸುತಾ ।
ಸ್ನಾನ ಮಡಿ ವಸ್ತ್ರಗಳ ವಿಚಾರಿಸುತಾ । ಅಂಕ್ಯಮ್ಮನವರಿರುತಿರ್ದರ್ ॥ ೩೧೬ ॥

ಹೆತ್ತ ಹೆತ್ತ ಎಂದು ಕರೆಯಿಸಿಕೊಳ್ಳುತ । ಲಿರ್ದರು ಅಂಕ್ಯಮ್ಮನವರು ।
ಪರಮ ವಿಶಾಲಭಾವವಗೈಯ್ಯುತ । ಆರ್ಜಿಕೆಯಂತೆ ತಾವಿರ್ದರ್ ॥ ೩೧೭ ॥

ವಂಚನೆ ಭೇದವ ಮಾಡದೆ ಮಕ್ಕಳ । ಯೋಗಕ್ಷೇಮವ ನೋಡುತಿರ್ದರ್ ।
ಊಟೋಪಚಾರವ ತಾವ್ ಸಿಂತು ಮಾಡಿಸಿ । ಮಕ್ಕಳನು ಹರಸುತಲಿರ್ದರ್ ॥ ೩೧೮ ॥



ಸ್ವ || ಅನಂತೇಗೌಡರೊಡನೆ ಪದ್ಮಯ್ಯನವರು



ಬರವಣಿಗೆಯಲ್ಲಿ ಮಗ್ನರಾದ ಪದ್ಮಯ್ಯನವರು

ಮಕ್ಕಳ ಕ್ಷೇಮವೆ ತನ್ನಯ ಕ್ಷೇಮವು। ಸತತವು ಚಿಂತಿಸುತಿರ್ದರ್।
ಪಂಚಣಮೋಕ್ಕಾರ ಮಂತ್ರವ ಪೇಳುತ। ಮಕ್ಕಳ ಮೈದಡವುತಿರ್ದರ್ ॥ ೩೧೯ ॥

ಅಂದು ದಿನ ಬೆಳಗಿನ ಸ್ನಾನವಗೈದು। ಜಿನಪೂಜಿಸಿ ಬರುತಿರಲು।
ಕಾಲುಜಾರಿ ಬಿದ್ದರು ಮೂರ್ಛೆ ಹೋದರು। ಗುಣಾವತಿ ಅಂಕ್ಯಮ್ಮನವರು ॥ ೩೨೦ ॥

ಶ್ರೀಕಾಂತಶಾಸ್ತ್ರಿಗಳು ಬಂದರು ಶ್ರೀ ಪಂಚ। ಮಂತ್ರೋಪದೇಶವಗೈದರ್।
ಕಣ್ಣೀರು ಸುರಿಸುತ ವಿದ್ಯಾರ್ಥಿ ವೃಂದವು। ಅಶ್ರುಧಾರೆಗಳಿಂದ ನಿಂತರ್ ॥ ೩೨೧ ॥

ಕಿವಿಯಲಿ ಪಂಚಣಮೋಕ್ಕಾರ ಮಂತ್ರವ। ಕೇಳುತ ಅಂಕ್ಯಮ್ಮನವರು।
ಪ್ರಾಣವ ಬಿಟ್ಟರು ಸದ್ಗತಿ ಪಡೆದರು। ಸತ್ಪುಣ್ಯ ಪ್ರೇರಣೆಯಿಂದ ॥ ೩೨೨ ॥

ಪದುಮಯ್ಯಗೌಡರು ಮಾತೆ ಅಂಕ್ಯಮ್ಮ। ನವರಂತೆ ಬಾಳಲುಬೇಕು।
ಮನ ವಚನ ಕಾಯ ಶುದ್ಧತೆಯಿಂದಲಿ। ನಿತ್ಯವು ನಡೆಯಲು ಬೇಕು ॥ ೩೨೩ ॥

ವಿದ್ಯಾರ್ಥಿಸೇವೆಗೆ ಮತ್ತೊಬ್ಬ ಅಜ್ಜಿಯು। ಬಂದರು ಕರಿಂಗುತ್ತಿಯಿಂದ।
ಕರಿಂಗುತ್ತಿ ಹೆತ್ತ ಹೆತ್ತ ಎಂದು ಕರೆದರು। ಮಕ್ಕಳು ಸಂತೋಷದಿಂದ ॥ ೩೨೪ ॥

ಅಂಕ್ಯಮ್ಮನವರಂತೆ ಕರಿಂಗುತ್ತಿ ಅಜ್ಜಿಯು ಮಕ್ಕಳ ಶುಶ್ರೂಷೆಗೈದು।
ಹೆತ್ತ-ಹೆತ್ತ ಎಂದು ಕರೆಯಿಸಿಕೊಳ್ಳುತ। ಪ್ರೀತಿಯಿಂ ಪಾಲಿಸುತಿರ್ದರ್ ॥ ೩೨೫ ॥

ಮಕ್ಕಳ ಸೇವೆಗೆ ತನ್ನ ಮಾತೆಯ ಬಿಟ್ಟು। ಧರ್ಮಸೇವೆಯ ಗೈಸಿದರು।
ಶ್ರೀ ಪದುಮಯ್ಯಗೌಡರು ಮಕ್ಕಳನು। ಧಾರ್ಮಿಕರಾಗಿಸುತಿರ್ದರ್ ॥ ೩೨೬ ॥

## ಎಂ. ಕೆ. ಅನಂತಯ್ಯನವರು

ಕೃಷ್ಣೇಗೌಡರ ಪುತ್ರರಾಗಿ ಶ್ರೀ। ಅನಂತೇಗೌಡರು ಜನಿಸಿದರು।
ಸುಬ್ಬೇಗೌಡರ ತಮ್ಮಂದಿರಾಗಿ। ಧರ್ಮದಿಂ ತಾವು ಬಾಳಿದರು ॥ ೩೨೭ ॥

ಗುಪ್ತದಾನಿಯಾಗಿ ಲಕ್ಷಾಂತರ ರೂ. ಗಳನು। ಧರ್ಮಕ್ಕೆ ನೀಡುತಲಿ।
ನಡೆವಾಗ ನುಡಿವಾಗ ಅರಿಹಂತನೆನ್ನುತ। ಅರಹಂತ ಭಕ್ತರಾಗಿರ್ದರ್ ॥ ೩೨೮ ॥

ವಾಸದ ಮನೆಯೊಂದು ಕಟ್ಟಿದ ಗೃಹವನು। ವಿದ್ಯಾರ್ಥಿನಿಲಯಕ್ಕೆ ಕೊಟ್ಟು।
ಉತ್ತಮ ತೋಟಗದ್ದೆಗಳನ್ನು ತಾವು ಬಿಟ್ಟು। ಉತ್ತಮ ದಾನಿಯೆನ್ನಿಸಿದರ್ ॥ ೩೨೯ ॥

ಅಷ್ಟಮದಗಳನ್ನು ಬಿಟ್ಟು ನಡೆವರಾಗಿ । ಹಿತಮಿತ ಮಧುರ ಮಾತುಗಳಿಂ ।
ಅನಂತೇಗೌಡರು ಶೋಭಿಸುತಿರ್ದರು । ಸರಳ ಸೌಂದರ್ಯತೆಯಿಂದ ॥ ೩೩೦ ॥

ಸರಳ ಸ್ವಭಾವಿಯ ಲಕ್ಷ್ಮಿಯು ಕೈ ಹಿಡಿ । ಯುವಳು ಎಂಬ ಮಾತು ದಿಟವು ।
ಲಕ್ಷ್ಮಿಯು ತುಂಬುತಲಿರ್ದಳು ಅನಂತೇ । ಗೌಡರ ವಾಸಗೃಹದೊಳ್ ॥ ೩೩೧ ॥

ಬಂದ ಜನರನು ಕೈಮುಗಿದು ಕುಳ್ಳಿರಿಸುತ । ಅನಂತೇಗೌಡರು ತಾವು ।
ಯೋಗಕ್ಷೇಮವನೆಲ್ಲ ವಿಚಾರಿಸಿ । ಸತ್ಕಾರ ಗೈಯುತಲಿರ್ದರ್ ॥ ೩೩೨ ॥

ಪದುಮಯ್ಯನವರ ಬಲವಾದ ಸ್ನೇಹದಿ । ಶ್ರೀ ಅನಂತೇಗೌಡರಿರುತಾ ।
ಪದುಮಯ್ಯಗೌಡರ ಪದ್ಮಯ್ಯ ಪದ್ಮಯ್ಯ । ಎಂದು ಕರೆಯುತಲಿರ್ದರ್ ॥ ೩೩೩ ॥

ಯಾವುದೇ ಕೆಲಸಕ್ಕೂ ಪದುಮಯ್ಯ ಬರಲಿ । ಎಂದು ತಾವ್ ಹೇಳುತಲಿರ್ದರ್ ।
ಪದುಮಯ್ಯ ಬಂದರೆ ಧರ್ಮವು ಬಂದಂತೆ । ಮಾತು ಮಾತಿಗೂ ಪೇಳುತಿರ್ದರ್
॥ ೩೩೪ ॥

ಧರ್ಮವೇ ಪದುಮಯ್ಯ ಪದುಮಯ್ಯ ಧರ್ಮವು । ಎಂದು ಆಗಾಗ್ಗೆ ತಾವ್ ಸ್ಮರಿಸಿ ।
ಪದುಮಯ್ಯನವರ ನೆನಸಿಕೊಂಡು ಕಣ್ಣೀರ । ಸುರಿಸುತಲಿರ್ದರು ಗೌಡರ್ ॥ ೩೩೫ ॥

ಶ್ರೀಕಾಂತ ಶಾಸ್ತ್ರಿಗಳಿಂದಲಿ ಧಾರ್ಮಿಕ । ಗ್ರಂಥಗಳನು ಬರೆಯಿಸುತಾ ।
ಪ್ರಕಟಿಸಿ ಶಾಸ್ತ್ರದಾನವ ತಾವು ಗೈಯ್ಯುತ । ನಿತ್ಯವು ಬಾಳುತಲಿರ್ದರ್ ॥ ೩೩೬ ॥

ಆಹಾರೌಷಧ ಅಭಯ ಶಾಸ್ತ್ರದಾನ । ನಿತ್ಯವು ತಾವು ಗೈಯ್ಯುತ್ತಾ ।
ಸಂತೋಷದಿಂದಲಿ ತಾವಿರುತಿರ್ದರು । ಉತ್ತಮ ಜಿನಭಕ್ತಿಯಿಂದ ॥ ೩೩೭ ॥

ಅನಂತಯ್ಯಗೌಡರ ಶ್ರೀ ಸದ್ಗುಣಂಗಳ ನಾವ್ ಅನುಸರಿಸಲು ಬೇಕು ।
ಸರಳತೆ ಶಾಂತಿಯ ಜೀವನ ಮಾರ್ಗವ । ನಿತ್ಯವು ಪಾಲಿಸಬೇಕು ॥ ೩೩೮ ॥

ಎಂ. ಸಿ. ಪದ್ಮನಾಭಶರ್ಮರ ಜತೆಯಲಿ । ಧರ್ಮದ ಚರ್ಚೆಯಗೈದು ।
ಉತ್ತಮ ಶಾಸ್ತ್ರಗ್ರಂಥವ ಪ್ರಕಟಿಸಿ । ಶಾಸ್ತ್ರದಾನಿಯೆನ್ನಿಸಿದರು ॥ ೩೩೯ ॥

"ತಿಲೋಯ ಪಣ್ಣತ್ತಿ" ಗ್ರಂಥವ ಪ್ರಕಟಿಸಲ್ । ಧನಸಹಾಯವನು ತಾವು ಗೈದು ।
ಆಚಾರ್ಯ ನಿರೂಪಿತ ಗ್ರಂಥವ ಪ್ರಕಟಿಸಿ । ಶಾಸ್ತ್ರಪ್ರೇಮಿ ಎನ್ನಿಸಿದರು ॥ ೩೪೦ ॥

ಪದುಮಯ್ಯನವರನು ಬಹುಪ್ರೀತಿಯಿಂದಲಿ । ನೆನಪಿಸಿಕೊಳ್ಳುತಲಿರ್ದರ್ ।
ಎನ್ನೆಯ 'ಪ್ರತ್ಯಕ್ಷದೇವರು' ಎನ್ನುತ । ಲಿರ್ದರು ಅನಂತೇಗೌಡರ್ ॥ ೩೪೧ ॥

## ಶ್ರೀ ಎಂ. ಕೆ. ಜಿನಚಂದ್ರರು

ಶ್ರೀ ಜಿನಚಂದ್ರರ ಚರಿತೆಯ ಹೇಳಲು। ನಾನಾದರೂ ಶಕ್ತನಲ್ಲ।
ಹಣತೆಯಿಂ ಸೂರ್ಯನ ಪೂಜಿಪ ತೆರದೊಳು। ಜಿನಚಂದ್ರರನು ಗೌರವಿಸುವೆ ॥೩೪೨॥

ಕೃಷ್ಣೇಗೌಡರ ಸತ್ಪುತ್ರರಾಗಿ ಶ್ರೀ। ಜಿನಚಂದ್ರರು ಜನಿಸಿದರು।
ಅನಭಿಶಕ್ತ ಸಾಮ್ರಾಟನ ತೆರದಲಿ। ಭಾರತದೊಳು ಶೋಭಿಸಿದರು ॥೩೪೩॥

ಎರಡು ಸಾರಿ ಲೋಕಸಭೆಗೆ ತಾವಾರಿಸಿ। ಬಂದರು ಸದಸ್ಯರಾಗಿ।
ಉತ್ತಮ ಸಲಹೆಯ ನೀಡುವ ಉತ್ತಮ। ರಾಜಕಾರಣಿಯಾಗಿ ಮೆರೆದರ್ ॥೩೪೪॥

ಪೊಂಬುಜ ಕ್ಷೇತ್ರವ ಜೀರ್ಣೋದ್ಧಾರಗೈದು। ಪಂಚಕಲ್ಯಾಣ ಮಾಡಿಸಿದರ್।
ಜಿನದತ್ತರಾಯನೇ ಜನಿಸಿ ಬಂದಿಹನೆಂದು। ಜನರ ಬಾಯಿಂದ ಕೇಳಿದರು ॥೩೪೫॥

ಸಾವಿರದೊಂಬೈನೂರರವತ್ತೊಂಬತ್ತರ। ಮಹಾಮಸ್ತಕಾಭಿಷೇಕದೊಳು।
ಪ್ರಥಮ ಕಲಶವನು ತೆಗೆದರ್ ಜಿನಚಂದ್ರರ್। ಶ್ರವಣಬೆಳಗೊಳ ಕ್ಷೇತ್ರದೊಳು॥೩೪೬॥

ಪಾಲಕ್ಕಾಡಿನ ಜಿನಮಂದಿರವನು। ಭಕ್ತಿಯಿಂದ ಜೀರ್ಣೋದ್ಧಾರಗೈಸಿ।
ನಿತ್ಯಪೂಜೆಗೆ ಸಂಪತ್ತನಿರಿಸುತಾ। ಮಹದಾನಿ ಜಿನಚಂದ್ರರಾದರ್ ॥೩೪೭॥

ಭಾರತದಾದ್ಯಂತ ಶ್ರೀ ಜಿನಚಂದ್ರರ। ಹೆಸರ ಕೇಳದವರೇ ಇಲ್ಲ।
ದಾನವೀರ ಜಿನಚಂದ್ರರ ಗುಣಗಾನ। ಮಾಡದವರು ತಾನಿಲ್ಲ ॥೩೪೮॥

ಇಂಥ ಮಹೋನ್ನತ ಶ್ರೀ ಜಿನಚಂದ್ರರು। ಪದುಮಯ್ಯನವರ ಗೌರವಿಸಿ।
ನನ್ನಯ ಪ್ರತ್ಯಕ್ಷ ದೇವರೆ ಪದುಮಣ್ಣ। ರೆಂದೆನುತಿರ್ದರು ಮುದದೀ ॥೩೪೯॥

ಶ್ರೀ ಜಿನಚಂದ್ರರ ದಾನದ ಹಿಂದೆಯೇ। ಪದುಮಯ್ಯನವರಿರುತಿರ್ದರ್।
ಜಿನ್ನ ಜಿನ್ನ ಎಂದು ಚೆನ್ನಾಗಿ ಕರೆಯುತ। ಧರ್ಮಮಾರ್ಗವ ತೋರುತಿರ್ದರ್ ॥೩೫೦॥

ರಾಜಕಾರಣದಲ್ಲೂ ಧರ್ಮವ ಮರೆಯದೆ। ಧರ್ಮವೇ ಪ್ರಧಾನವೆಂದು।
ರಾಜಕೀಯದೊಳಿಗಿರ್ದರು ಜಿನಚಂದ್ರ। ಧರ್ಮವ ತಾವ್ ಬಿಡಲಿಲ್ಲ ॥೩೫೧॥

ಧರ್ಮವೆ ತನ್ನನ್ನು ಇಂಥ ಮಹೋನ್ನತ। ಸ್ಥಿತಿಗೆ ತಂದಿತೆನ್ನುತಿರ್ದರ್।
ಧರ್ಮವ ನಂಬಿದವನಿಗೆ ಮಹೋನ್ನತ। ಪದವಿ ಸಿಗುವುದೆನ್ನುತಿರ್ದರ್ ॥೩೫೨॥

## ಶ್ರೀ ಕನಕಪ್ರಭಯ್ಯನವರು

ಮಳಲಿಯಿಂದಲಿ ಬಂದು ವೈನಾಡಿನೊಳು ನಿಂದು । ಜನಮನವನು ಸೂರೆಗೊಂಡು ।
ಕನಕಪ್ರಭಯ್ಯನವರು ಶೋಭಿಸಿರ್ದರು । ರಾಜಗುರುಗಳ ತೆರದಿ ॥ ೩೫೩ ॥

ಕೃಷ್ಣೇಗೌಡರ ಕಾಲದಿ ಮಳಲಿಯಿಂ । ಧರ್ಮ ನಿಮಿತ್ತದಿಂ ಬಂದು ।
ನೂತನ ಜಿನಮಂದಿರಗಳ ನಿರ್ಮಾಣದ । ನೇತೃತ್ವವನು ವಹಿಸಿದರು ॥ ೩೫೪ ॥

ಪುಲಿಯಾರುಮಲೆಯನಂತ ಜಿನೇಂದ್ರನ । ಪಂಚಕಲ್ಯಾಣ ಸಮಯದಿ ।
ಪೂಜಾ ನೇತೃತ್ವವಹಿಸಿ ನಡೆಸುತ । ಕನಕಪ್ರಭಯ್ಯ ತಾವಿರ್ದರ್ ॥ ೩೫೫ ॥

ಎಲ್ಲರ ಬಾಯೊಳು ಕನಕಯ್ಯ ಕನಕಯ್ಯ । ನವರೆಂದು ಕರೆಸಿಕೊಳ್ಳುತ್ತಾ ।
ಕನಕದ ತೆರದಲಿ ಕಲುಷವಿಲ್ಲದೆ ಶ್ರೀ । ಕನಕಯ್ಯನವರಿರುತಿರ್ದರ್ ॥ ೩೫೬ ॥

ಮಾನಂದವಾಡಿಯ ಬಸದಿ ನಿರ್ಮಾಣವ । ತಾವೇ ನಿಂತು ನಡೆಯಿಸುತಾ ।
ಪಂಚಕಲ್ಯಾಣ ಪ್ರತಿಷ್ಠೆಯ ಮಾಡಿಸಿ । ಧರ್ಮಧ್ವಜವನೇರಿಸಿದರು ॥ ೩೫೭ ॥

ಬೆಣ್ಣ್ಗಾಡು ಪುತ್ತಂಗಡಿ ಪಾಲುಗುಂದದಿ । ಕನಕಪ್ರಭಯ್ಯನವರ್ ।
ಮಾಡಿದ ಸೇವೆಯ ನಿಂದಿಗೂ ಜನಗಳು । ಆನಂದದಿಂ ಪೇಳುತಿಹರು ॥ ೩೫೮ ॥

ಪದುಮಯ್ಯಗೌಡರು ಕನಕಯ್ಯನವರಲಿ । ಅತಿ ವಿಶ್ವಾಸವನಿರಿಸಿರ್ದರ್ ।
ಧರ್ಮದ ಸಲಹೆಯ ಪಡೆಯುತ ಕೇಳುತ । ಧಾರ್ಮಿಕ ಪ್ರೀತಿಯಿಂದಿರ್ದರ್ ॥ ೩೫೯ ॥

ಯಾವುದೇ ಕೆಲಸಕ್ಕೂ ಕನಕಪ್ರಭಯ್ಯ । ನವರ ಹೆಸರನು ಪೇಳುತಿರ್ದರ್ ।
ಪೂಜಾ ಪ್ರತಿಷ್ಠಾನ ಕಾರ್ಯದ ಭಾರವ । ಗೈಸುತ ತಾವಿರುತಿರ್ದರ್ ॥ ೩೬೦ ॥

ಶ್ರೀ ಜಿನಚಂದ್ರರು ಶ್ರೀ ಕನಕಪ್ರಭಯ್ಯ । ನವರ ಮೇಲೆ ವಿಶ್ವಾಸವಿರಿಸಿ ।
ಹಲವು ತೆರದ ಧರ್ಮಕಾರ್ಯವ ನಡೆಸಲು । ತವಕದಿಂ ಪೇಳುತಲಿರ್ದರ್ ॥ ೩೬೧ ॥

ಕಲ್ಪಾವತಿ ನಗರದಿ ಕಟ್ಟಿಸಿದ । ಪ್ರೌಢ ವಿದ್ಯಾಶಾಲೆಯನ್ನು ।
ಕನಕಪ್ರಭಯ್ಯನವರ ನೇತೃತ್ವದಿ । ನಿರ್ಮಿಸಿದರು ಪ್ರೀತಿಯಿಂದ ॥ ೩೬೨ ॥

ಪುರೋಹಿತದ ಶಿಷ್ಯರ ಬೆಳೆಸುತಾ । ಪೂಜಾವಿಧಾನ ಕಲಿಸುತಾ ।
ಪೂಜಾಪ್ರತಿಷ್ಠಾನಮಂತ್ರವ ಕಲಿಸುತಾ । ಪುರೋಹಿತರ ನಿರ್ಮಿಸಿದರ್ ॥ ೩೬೩ ॥

ಹೋಮ ಹವನ ಮಂತ್ರ ಪೂಜಾ । ಪ್ರತಿಷ್ಠಾನ ಪಂಡಿತರೆನಿಸಿಕೊಳ್ಳುತಾ ।
ಶ್ರೀ ಕನಕಪ್ರಭಯ್ಯನವರು । ತಾವು ಉತ್ತಮ ಜ್ಞಾನಿಯೆನ್ನಿಸಿದರ್ ॥ ೩೬೪ ॥

ಪೊಂಬುಜ ಪಂಚಕಲ್ಯಾಣ ಸಮಯದಿ । ಕನಕಪ್ರಭಯ್ಯನವರ್ ।
ವೃದ್ಧಾಪ್ಯದಿಂದಲಿ ಬಳಲುತಿದ್ದರು ಸಹ । ಪೂಜಾನೇತೃತ್ವ ವಹಿಸಿದರ್ ॥ ೩೬೫ ॥

ನಿಷ್ಠೆಯಿಂದಲಿ ಪಂಚಕಲ್ಯಾಣಗೈಸುತ । ಪಾರ್ಶ್ವ ಜಿನರ ಸೇವೆಗೈಯ್ದರ್ ।
ಮಾತೆ ಪದ್ಮಾವತಿ ಸೇವೆಯಗೈದು । ಗುರುಗಳಾಶೀರ್ವಾದ ಪಡೆದರ್ ॥ ೩೬೬ ॥

ಪೊಂಬುಜದಿಂ ಬರುವಾಗಲೆ ವೃದ್ಧ । ಶ್ರೀ ಕನಕಪ್ರಭಯ್ಯನವರ್ ।
ಸಮಾಧಿಮರಣದಿಂ ದೇಹವ ಬಿಟ್ಟರು । ಉತ್ತಮ ಗತಿಯನು ಪಡೆದರ್ ॥ ೩೬೭ ॥

ಕನಕಪ್ರಭಯ್ಯನವರ ಸದ್ಗುಣಂಗಳ । ನಾವೆಲ್ಲ ಕೊಂಡಾಡಬೇಕು ।
ಗುಣಿಗಳ ಗುಣಗಳ ಪಾಡುತ ನಿತ್ಯವು । ಗುಣವಂತರಾಗಲು ಬೇಕುು ॥ ೩೬೮ ॥

## ಪುರೋಹಿತ ಧನ್ಯಕುಮಾರಯ್ಯನವರು (ಪುಟ್ಟಯ್ಯನವರು)

ಪುಲಿಯಾರುಮಲೆಯ ಧನ್ಯಕುಮಾರಯ್ಯ । ನವರನು ಪುಟ್ಟಯ್ಯರೆಂದು ।
ಕರೆವರು ವೈನಾಡುಜನಗಳು ಪ್ರೀತಿಯಿಂ । ಪುರೋಹಿತ ವಾತ್ಸಲ್ಯದಿಂದ ॥ ೩೬೯ ॥

ಪುರೋಹಿತದ ಪೂರ್ಣಜ್ಞಾನವ । ತಿಳಿದಿರ್ದ ಪುಟ್ಟಯ್ಯನವರು ।
ಪದುಮಯ್ಯನವರಲಿ ಪ್ರೀತಿಯಿಂದಿರ್ದು । ಧರ್ಮಚರ್ಚೆಯ ಗೈಯ್ಯುತಿರ್ದರ್ ॥ ೩೭೦ ॥

ಉತ್ತಮ ಪೂಜಾಮಂತ್ರವ ತಿಳಿದಿರ್ದ । ಪುರೋಹಿತ ಪುಟ್ಟಯ್ಯನವರು ।
ಪದುಮಯ್ಯನವರಲಿ ವಿಶ್ವಾಸವಿರಿಸಿರ್ದರ್ । ಪರಮ ಧಾರ್ಮಿಕ ಸ್ನೇಹದಿಂದ ॥ ೩೭೧ ॥

ಯಾವಾಗ ಬಸದಿಗೆ ಬಂದರೂ ಪುಟ್ಟಯ್ಯ । ನವರನು ಕಾಣುತಲಿದ್ದರ್ ।
ಪೂಜಾಮಂತ್ರ ಪಾಠಸ್ತುತಿಯಚರ್ಚೆಗೈದು ಧರ್ಮಾನುರಾಗಿಯಾಗಿದ್ದರ್ ॥ ೩೭೨ ॥



## ನೀರುಬೈಲು ರಾಮಚಂದ್ರಗೌಡರ ಮೇಲೆ ಧರ್ಮಪ್ರಭಾವ

ಶ್ರೀರಾಮನಂತೆ ಧರ್ಮದ ಮನಸನು ಹೊಂದಿ । ಶ್ರೀರಾಮನನುಕರಿಸುತಲೀ ।
ಶ್ರೀರಾಮಚಂದ್ರನ ನಾಮವ ತಾವ್ ಹೊಂದಿ । ರಾಮಚಂದ್ರಗೌಡರಿಹರು ॥೩೭೩॥

ನೀರುಬೈಲಿನ ತಮ್ಮ ಗೃಹದಿ ವಾಸಿಸುತ । ಧರ್ಮಮಾರ್ಗದಿ ತಾವ್ ನಡೆಯುತಾ ।
ಧರ್ಮದ ಮರ್ಮವನರಿಯದಿರ್ದರು ಸಹ । ಧಾರ್ಮಿಕರಾಗಿ ಬಾಳುತಿಹರ್ ॥೩೭೪॥

ರಾಮಚಂದ್ರಗೌಡರಿಂದಲಿ ಧರ್ಮದ । ಪ್ರಭಾವವಾಗುವುದರಿತು ।
ಶ್ರೀ ಪದುವಯ್ಯಗೌಡರು ಶ್ರೀ ಲೋಕ । ಪಾಲ ಶಾಸ್ತ್ರಿಗಳ ಕಳಿಸಿದರ್ ॥೩೭೫॥

ಎರಡು ತಿಂಗಳು ಕಾಲ ಶ್ರೀ ಲೋಕಪಾಲ । ಶಾಸ್ತ್ರಿಗಳು ತಾವು ಬಿಡದೇ ।
ಧರ್ಮರಹಸ್ಯವನೆಲ್ಲವ ತಿಳಿಸಿದರ್ । ಶ್ರೀ ರಾಮಚಂದ್ರಗೌಡರಿಗೆ ॥೩೭೬॥

ಧರ್ಮರಹಸ್ಯವ ತಿಳಿದ ರಾಮಚಂದ್ರ । ಗೌಡರು ಪುತ್ತೂಂಗಡಿಯೊಳು ।
ಚಂದ್ರಜಿನೇಂದ್ರನ ಸುಂದರ ಬಸದಿಯ । ನಿರ್ಮಿಸಿ ಧಾರ್ಮಿಕರಾದರ್ ॥೩೭೭॥

ತಮ್ಮದೇ ಸ್ವಂತ ಖರ್ಚಿನಲಿ ಪಂಚ । ಕಲ್ಯಾಣವನು ಮಾಡಿಸುತಲೀ ।
ಧರ್ಮಾತ್ಮ ಜಿನಚಂದ್ರರ ಸಲಹೆಯ ಮೇರೆ । ಧರ್ಮಕೆ ದಾನವ ಸುರಿದರ್ ॥೩೭೮॥

## ಎಂ. ಸಿ. ಅಜಿತ್‌ಕುಮಾರ್ (ಅಜಿತಯ್ಯನವರು)

ಚಲುವಯ್ಯನವರ ಸತ್ಪುತ್ರ ಶ್ರೀ ಎಂ. ಸಿ. ಅಜಿತ್‌ಕುಮಾರರೊಡನೆ ।
ಶ್ರೀರಾಮಚಂದ್ರಗೌಡರು ಧಾರ್ಮಿಕ । ಕಾರ್ಯಕೆ ನೆರವಾಗುತಿದ್ದರ್ ॥೩೭೯॥

ದಿಟ್ಟ ಮನಸ್ಸಿನ ದಿಟ್ಟ ಹೋರಾಟಗಾರ । ದಿಟ್ಟ ಧಾರ್ಮಿಕನಾಗಿ ಮೆರೆದು ।
ಶಿಷ್ಟಾಚಾರವದಿಟ್ಟತೆಯಿಂದಗೈದು । ಅಜಿತರವರು ಶೋಭಿಸಿದರು ॥೩೮೦॥

ಪುನ್ನಾಡುನಾಡಿನ ಮಳಲಿಯಿಂದಲಿ ಬಂದು । ಚನ್ನಾದ ಪುತ್ತೂಂಗಡಿಯೊಳು ।
ಶ್ರೀ ಚಂದ್ರನಾಥನ ಪೂಜೆಯ ಮಾಡುತ । ಅಜಿತಯ್ಯನವರಿರುತಿಹರು ॥೩೮೧॥

ಸಿರಿತನವಾದರೂ ಶ್ರೀ ಜಿನಚಂದ್ರರು । ಅಜಿತಯ್ಯನವರ ಗೆಳೆಯರು ।
ಗೆಳೆಯನ ಕಾಣುವ ತೆರದಲಿ ಜಿನಚಂದ್ರರ್ । ಅಜಿತರವರ ನೋಡುತಿದ್ದರ್ ॥೩೮೨॥

ಶ್ರೀ ಜಿನಚಂದ್ರರು ಶ್ರೀ ರಾಮಚಂದ್ರರು । ಶ್ರೀ ಪದುಮಯ್ಯನವರಿಂದ ।
ಧರ್ಮವ ಕಂಡರ್ ಧರ್ಮವ ನಂಬಿದರ್ । ಧಾರ್ಮಿಕರಾಗಿ ತಾವ್ ಮೆರೆದರ್ ॥೩೮೩॥

ಶ್ರೀ ಜಿನಚಂದ್ರರು ಶ್ರೀ ರಾಮಚಂದ್ರರ । ಧರ್ಮದ ಸಂಪರ್ಕದಿಂದ ।
ಧಾರ್ಮಿಕ ಕಾರ್ಯವ ನಡೆಸಿದರ್ ಭಕ್ತಿಯಿಂ । ಶ್ರೀ ಅಜಿತಯ್ಯನವರು ॥೩೮೪॥

ಶ್ರೀ ಪದುಮಯ್ಯಗೌಡರು ಇಲ್ಲದಿರ್ದೊಡೆ ನಾವು । ಧರ್ಮವ ಮರೆಯುತ್ತಿದ್ದೇವ್ ।
ಎಂದು ಪೇಳಿದರು ಶ್ರೀ ಅಜಿತಯ್ಯನವರು । ಆನಂದಾಶ್ರುಗಳನ್ನು ಸುರಿಸಿ ॥ ೩೮೫ ॥

ಶ್ರೀ ರಾಮಚಂದ್ರ ಶ್ರೀ ದೇವಚಂದ್ರ । ಗೌಡರ ಬಳಿ ಶ್ರೀ ಪದುಮಯ್ಯಗೌಡರು ।
ಧರ್ಮದ ಚರ್ಚೆಯ ಮಾಡುತಲಿದ್ದರ್ । ಅಜಿತಸ್ವಾಮಿ ಸ್ಮರಿಸುತಿಹರ್ ॥ ೩೮೬ ॥

ಅಜಿತಸ್ವಾಮಿಯವರು ಸುಬ್ಬಯ್ಯಗೌಡರ । ಕಥೆಯನು ಪೇಳದ ತೆರದಿ ।
ಬರೆಯುತಲಿರುವೆನು ಚನ್ನಾಗಿ ಓದಿರಿ । ಶಕ್ತಿಯಂತೆ ಆಚರಿಸಿರಿ ॥ ೩೮೭ ॥

ವೈನಾಡಿನಲೆಲ್ಲಾ ಬಸದಿಯ ಮುಂಭಾಗ । ದಲ್ಲಿ ಸಂಪಿಗೆ ಮರ ಬೆಳಸಿ ।
ಸಂಪಿಗೆ ಹೂವಿನ ಸಂಪಾದ ಪೂಜೆಯ । ಜಿನರಿಗೆ ತಾವ್ ಗೈಸುತಿರ್ದರ್ ॥ ೩೮೮ ॥

ಸುಬ್ಬಯ್ಯಗೌಡರು ತಮ್ಮ ಹಸ್ತದಿ ನೆಟ್ಟ । ಎಲ್ಲಾ ಸಂಪಿಗೆ ವೃಕ್ಷಗಳು ।
ಇಂದಿಗೂ ನಿಂತಿವೆ ಹೂವನು ಕೊಡುತಿವೆ । ಜಿನನ ಪಾದಕೆ ಸೇರುತಿವೆ ॥ ೩೮೯ ॥

ಎತ್ತಿನ ಗಾಡಿಯೋಳ್ ವೈನಾಡಿನಲೆಲ್ಲಾ । ಬಸದಿಗೂ ತಿಂಗಳಿಗೊಮ್ಮೆ ।
ಹೋಗಿ ದರ್ಶನಗೈದು ಪೂಜಾಭಿಷೇಕವ । ತಾವೇ ನಿಂತು ಗೈಸುತಿರ್ದರ್ ॥ ೩೯೦ ॥

ಸುಬ್ಬಯ್ಯಗೌಡರ ಸುಹೃದಯವ ಜನ । ಇಂದಿಗೂ ಪೊಗಳುತಲಿಹರು ।
ಧರ್ಮಬೀಜವ ಬಿತ್ತಿದ ಧರ್ಮಾತ್ಮನ । ತುಂಬು ಮನದಿ ಸ್ಮರಿಸುತಿಹರ್ ॥ ೩೯೧ ॥



## ಎಂ. ಪಿ. ಸಿ. ಜೈನ್

ಕುನ್ನಂಬೆಟ್ಟದ ಎಂ. ಪಿ. ಸಿ. ಜೈನ್ ಎಂಬ । ನಾಮಾಂಕಿತ ಚಂದ್ರಶೆಟ್ಟರ್ ।
ಪದುಮಯ್ಯನವರ ತೋಟಕಾರ್ಯಾಲಯವ । ಶಿಸ್ತಿನಿಂ ನಡೆಸುತಲಿರ್ದರ್ ॥ ೩೯೨ ॥

ಪಾಲ್ಘಾಟನಿಂ ಬಂದು ವೈನಾಡಿನೊಳು ನಿಂತು । ತೋಟವ ಸಂಪಾದಿಸಿದರು ।
ಎಂ. ಪಿ. ಸಿ. ಜೈನರು ಶಿಸ್ತಿಗೆ ಹೆಸರಾಗಿ । ಉತ್ತಮ ವ್ಯಕ್ತಿಯೆನ್ನಿಸಿದರ್ ॥ ೩೯೩ ॥

ಎಂ. ಪಿ. ಸಿ. ಜೈನರ ಧರ್ಮದ ಪ್ರೀತಿಯ । ಜಿನಚಂದ್ರರು ಮನಗಂಡು ।
ಪೊಂಬುಜ ಕ್ಷೇತ್ರದಿ ಸೇವೆಯಗೈಯ್ಯಲು । ಸಂತೋಷದಿಂ ಕೇಳಿಕೊಂಡರ್ ॥ ೩೯೪ ॥

ಧರ್ಮದ ಪ್ರೇಮದಿಂ ಎಂ. ಪಿ. ಸಿ. ಜೈನರು । ಪೊಂಬುಜದೊಳು ಸೇವೆಗೈಯ್ದು ।
ಜಗದ್ಗುರು ದೇವೇಂದ್ರಕೀರ್ತಿಗಳಾ । ಶೀರ್ವಾದವ ಭಕುತಿಯಿಂ ಪಡೆದರ್ ॥ ೩೯೫ ॥

ಪೊಂಬುಜದೊಳು ನಿಂತು ಪೊಂಬುಜರಮ್ಮನ । ಭಕುತಿಯಿಂ ಸೇವೆಯ ಗೈದು ।
ಪದುಮಯ್ಯಗೌಡರ ವಿಶ್ವಾಸದಿಂದಲಿ । ಧರ್ಮದ ಸೇವೆಯಗೈಯ್ದರ್ ॥ ೩೯೬ ॥

ಎಂ. ಪಿ. ಸಿ. ಜೈನರ ಧರ್ಮಪತ್ನಿ ಶ್ರೀಮತಿ । ಸರಸ್ವತಿದೇವಿಯವರು ।
ಸಾಧ್ವಿಮಣಿಯಾಗಿ ಪರಮಸಾತ್ವಿಕರಾಗಿ । ಆದರ್ಶ ಮಹಿಳೆಯನ್ನಿಸಿದರ್ ॥ ೩೯೭ ॥

ಮಹಾಮಾತೆ ತೆರದೊಳು ಕಾಣುತ ಶ್ರೀ ಜಿನ । ಭಗವಂತನೊಳು ಭಕ್ತಿಯಿಡುತಾ ।
ಜಿನನುಪದೇಶದ ತೆರದೊಳು ನಡೆಯುತಾ । ಶ್ರಾವಕೋತ್ತಮೆಯನಿಸಿರ್ದರ್ ॥ ೩೯೮ ॥

ಇಂಥ ಮಹೋನ್ನತ ಪುಣ್ಯ ದಂಪತಿಗಳ । ಹಿರಿಯ ಪುತ್ರರಾಗಿ ಜನಿಸಿ ।
ಇಬ್ಬರು ಸಹೋದರರೊಡಗೂಡಿ ಬಾಳುತ । ಲಿರುವರು ಶ್ರೀ ಪದ್ಮರಾಜರ್ ॥ ೩೯೯ ॥

ಪತ್ನಿ ಮಕ್ಕಳ ಜೊತೆ ಆಗಾಗ್ಗೆ ಶ್ರೀ । ಜಿನಸಿದ್ಧ ಕ್ಷೇತ್ರಗಳ ದರ್ಶಿಸುತ ।
ಧರ್ಮದೊಲವಿನಿಂದ ಬಾಳುತಿಹರು ಪದ್ಮ । ರಾಜರು ಜಿನಭಕ್ತಿಯಿಂದ ॥ ೪೦೦ ॥

ಪೊಂಬುಜ ಕ್ಷೇತ್ರದಿ ಸೇವೆಯ ಗೈಯುವ । ಸಮಯದಿ ಎಂಪಿಸಿ ಜೈನರು ।
ಮರಣವ ಪಡೆದರು ಪೊಂಬುಜ ಕ್ಷೇತ್ರದಿ । ಪದ್ಮಾವತಿಯ ಸನ್ನಿಧಿಯೊಳು ॥



## ಶ್ರೀ ಪಿ. ಕೆ. ವರ್ಧಮಾನಗೌಡರು

ಪದುಮಯ್ಯನವರೊಡಗೂಡಿ ಶ್ರೀ ಪಿ. ಕೆ. । ವರ್ಧಮಾನಗೌಡರವರು ।
ಧರ್ಮದ ಸೇವೆಯ ಗೈಯ್ಯಲು ಕಲಿತರು ! ಧರ್ಮದ ಕೆಲಸವ ಗೈಯ್ದರ್ ॥ ೪೦೧ ॥

ಯಾವುದೇ ಧರ್ಮದ ಕೆಲಸವು ಬಂದರು । ವರ್ಧಮಾನರ ಕರೆಯಿಸುತಾ ।
ವರ್ಧಮಾನ ವರ್ಧಮಾನ ಕೇಳೆನ್ನುತ। ಧರ್ಮಕೆಲಸ ಪೇಳುತಿರ್ದರ್ ॥ ೪೦೨ ॥

ಚಪ್ಪರ ಹಾಕಲು ಜನಗಳ ಕರೆಯಲು । ಶ್ರೀ ವರ್ಧಮಾನನು ಬೇಕು ।
ಏಕವಚನದಿಂದ ಪೇಳುತಲಿರ್ದರ್ । ವರ್ಧಮಾನರ ಪ್ರೀತಿಯಿಂದ ।೪೦೩ ॥

ಪೊಂಬುಜ ಪಂಚಕಲ್ಯಾಣ ಸಮಯದಿ । ಶ್ರೀ ವರ್ಧಮಾನರು ನಿಂತು ।
ಚಪ್ಪರ ಸೇವೆಯ ಮಾಡಿದ ಕಾರ್ಯವ । ನಾನೇ ಕಣ್ಣಾರೆ ಕಂಡಿಹೆನು ॥ ೪೦೪ ॥

ಅತಿಥಿ ಸೇವೆ ರೋಗಿಯ ಶುಶ್ರೂಷೆ। ಯನು ವರ್ಧಮಾನರು ಗೈದು ।
ಜನಮನದೊಳು ಪ್ರೀತಿಯಿಂದಲಿ ಬೆರೆತರು । ಸನ್ಮತಿ ಶ್ರೀ ವರ್ಧಮಾನರ್ ॥ ೪೦೫ ॥

ಜಿನಭಕ್ತಿ ಭಾವದಿ ಜಿನಧರ್ಮ ಪ್ರೇಮದಿ । ಬಾಳುವ ವಿಜಯಕುಮಾರರ್ ।
ಶ್ರೀ ವರ್ಧಮಾನರ ಹಿರಿಯ ಸುಪುತ್ರರು । ಧರ್ಮದಿಂ ಬಾಳುತಲಿಹರು ॥ ೪೦೬ ॥

## ಶ್ರೀ ಲೋಕಪಾಲ ಶಾಸ್ತ್ರಿಗಳು

ದಕ್ಷಿಣಕನ್ನಡ ಕಾರ್ಕಳ ಸೀಮೆಯ । ಶಿಲಾ ಉಗ್ರಾಮದೊಳಿರುವ ।
ಬುಳ್ಳುಗುತ್ತು ಪದ್ಮಯ್ಯಪತಿವಾಳರ । ಲಕ್ಷ್ಮಿಮತಮ್ಮ ದಂಪತಿಗಳಿಗೆ ॥ ೪೦೭ ॥

ಸುಪುತ್ರರಾಗಿ ಜನಿಸಿದರು ಶ್ರೀ ಲೋಕ। ಪಾಲರೆಂಬ ಹೆಸರಿನೊಳು ।
ಗ್ರಾಮೀಣಶಾಲೆಯೋಳ್ ಬೆಳೆಯುತ ಲೌಖಿಕ । ವಿದ್ಯಾಭ್ಯಾಸವ ಕಲಿತರ್ ॥ ೪೦೮ ॥

ಶ್ರವಣಬೆಳಗೊಳದೊಳು ಶ್ರೀ ನೇಮಿಸಾಗರ । ವರ್ಣೀಜಿಯವರ ಶಿಷ್ಯರಾಗಿ ।
ನ್ಯಾಯತೀರ್ಥ ಕಾವ್ಯತೀರ್ಥವ ಮುಗಿಸಿ । ಪ್ರಾಧ್ಯಾಪಕರಾಗಿ ದುಡಿದರ್ ॥ ೪೦೯ ॥

ವಿದ್ಯಾಮಹತ್ವವ ಕಂಡು ಶ್ರೀ ಪದುಮಯ್ಯ । ಗೌಡರು ಆಹ್ವಾನಿಸಿದರು ।
ಧರ್ಮಪ್ರಭಾವನೆಗಾಗಿ ವೈನಾಡಿಗೆ । ಬರಲು ವಿನಂತಿಸಿಕೊಂಡರ್ ॥ ೪೧೦ ॥

ಆಹ್ವಾನವನ್ನಿಸಿ ಲೋಕಪಾಲಶಾಸ್ತ್ರಿಗಳು । ಕೇರಳಕ್ಕೆ ಬಂದು ।
ಜನಗಳಿಗಿರುವಂತೆ ಹಿತಮಿತಮಧುರದಿ । ಜಿನತತ್ವವನು ತಿಳಿಸಿದರು ॥ ೪೧೧ ॥

ಧರ್ಮದಂವಿಲ್ಲದರ್ಗೆ ಶ್ರೀ ಶಾಸ್ತ್ರಿಗಳ್ । ಧಾರ್ಮಿಕ ಜ್ಞಾನವ ನೀತಿ ।
ಧರ್ಮಜಾಗೃತಿಯನ್ನು ಮಾಡಿಸಿದರು । ಜಿನಧರ್ಮಕೆ ಜನರ ಸೆಳೆದರು ॥ ೪೧೨ ॥

ಹೆಗ್ಗಡದೇವನಕೋಟೆ ಸೀಮೆಯು । ಗ್ರಾಮ ಗ್ರಾಮದಿ ಸಂಚರಿಸಿ ।
ಧಾರ್ಮಿಕ ತತ್ವ ತಿಳಿಸಿದರು ಶ್ರೀ । ಬಿ. ಲೋಕಪಾಲ ಶಾಸ್ತ್ರಿಗಳು ॥ ೪೧೩ ॥

ಯಾರಿಗೆ ಧರ್ಮವು ತಿಳಿಯಬೇಕೆಂದರು । ಧರ್ಮಾತ್ಮ ಪದುಮಯ್ಯನವರು ।
ಲೋಕಪಾಲಶಾಸ್ತ್ರಿಗಳನ್ನು ಕಳುಹಿಸಿ । ಧರ್ಮವ ತಿಳಿಸುತಲಿರ್ದರ್ ॥ ೪೧೪ ॥

ಮಹದುಪಕಾರವ ಗೈದ ಲೋಕಪಾಲ । ಶಾಸ್ತ್ರಿಗಳಿಗೆ ವಂದಿಸುವೆನು ।
ಉತ್ತಮ ಕಾರ್ಯವ ಗೈಯ್ಯಲು ತಿಳಿಸಿದ । ಉತ್ತಮರಿಗೆ ವಂದಿಸುವೆನು ॥ ೪೧೫ ॥

ಶ್ರೀಲೋಕಪಾಲಶಾಸ್ತ್ರಿಗಳ ಸತ್ಪುತ್ರರು । ಶ್ರೀ ಜಯಕುಮಾರ್‌ರವರು ।
ವೈನಾಡು ಜೈನರಿಗೆ ಪ್ರಿಯರಾಗಿ ಬಾಳುತ । ಸರ್ವ ಸ್ನೇಹಿಗಳಾಗಿರುವರ್ ॥ ೪೧೬ ॥

## ಶ್ರೀ ಶ್ರೀಕಾಂತ ಶಾಸ್ತ್ರಿಗಳು

ಶ್ರೀಕಾಂತಶಾಸ್ತ್ರಿಗಳ ನಿತ್ಯವು ಮಕ್ಕಳ್ಗೆ । ಧಾರ್ಮಿಕ ತತ್ವವ ತಿಳಿಸಿ ।
ಒಂದು ಎರಡು ಮೂರು ನಾಲ್ಕನೇ ಬಾಲಬೋಧನೆಯ ಪಾಠಮಾಡಿಸುತಿರ್ದರ್ ॥ ೪೧೭ ॥

ಪ್ರತಿ ಭಾನುವಾರವು ವಿದ್ಯಾರ್ಥಿಗಳಿಂದ । ಅಭಿಷೇಕವನು ಗೈಸುತಿರ್ದರ್ ।
ಮಹಾಶಾಂತಿ ಮಂತ್ರವ ಪಠಿಸುತ್ತ ಜಿನಪೂಜೆ । ವಿಧಾನವನು ಕಲಿಸುತಿರ್ದರ್ ॥ ೪೧೮ ॥

ವಿದ್ಯಾರ್ಥಿ ವೃಂದದ ಕುಂದು । ಕೊರತೆಗಳನು ವಿಚಾರಿಸುತಲೀ ।
ವಿದ್ಯಾರ್ಥಿ ಕ್ಷೇಮವೇ ತನ್ನಯ ಕ್ಷೇಮವು । ಎಂದು ತಾವ್ ಭಾವಿಸುತಿರ್ದರ್ ॥ ೪೧೯ ॥

ಕರ್ನಾಟರಾಜ್ಯದ ಬೆಳಗಾಂ ಜಿಲ್ಲೆಯ । ಉಗಾರ ಬುದ್ರುಕ್ ಗ್ರಾಮದೊಳು ।
ಭುಜಬಲಿಪಂಡಿತ್ ಉಪಾಧ್ಯಾಯ ಚ್ಛಾಯಾ । ದೇವಿಯರ ಸುಪುತ್ರರಾಗಿ ಜನಿಸಿದರು ॥ ೪೨೦ ॥

ನ್ಯಾಯತೀರ್ಥ ಕಾವ್ಯತೀರ್ಥವ ಪಡೆದು । ಶಾಸ್ತ್ರಿ ಪದವಿಯ ಸ್ವೀಕರಿಸಿ ।
ಸೇವೆಗೆ ನಿಂತರು ವೈನಾಡಿನೊಳು । ವಿದ್ಯಾರ್ಥಿಗಳ ಬೋಧಕರಾಗಿ ॥ ೪೨೧ ॥

ಶ್ರೀಕಾಂತಶಾಸ್ತ್ರಿಗಳ ವಿದ್ವತ್ತೆಯು । ಕಂಡ ಜಿನಚಂದ್ರರು ಪದ್ಮೇಗೌಡರು ।
ಆಹ್ವಾನಿಸಿದರು ಬೋಧಕರಾಗಲು । ಜೈನ ವಿದ್ಯಾರ್ಥಿ ನಿಲಯದೊಳು ॥ ೪೨೨ ॥

ನೂರಾರು ವಿದ್ಯಾರ್ಥಿಗಳಿಗೆ ಬೋಧಕರಾಗಿ । ವಿದ್ಯಾರ್ಥಿಗಳ ಗುರುವಾಗಿ ।
ಧಾರ್ಮಿಕ ಸೇವೆಯ ನಡೆಸುತಲಿರುವರು । ಶ್ರೀಕಾಂತ ಶಾಸ್ತ್ರಿಗಳವರು ॥ ೪೨೩ ॥

ನೂರಾರು ಸಭೆಯಲಿ ಧಾರ್ಮಿಕಭಾಷಣ । ಗೈದಿಹರು ಶಾಸ್ತ್ರಿಗಳು ।
ಹಲವಾರು ಪಂಚಕಲ್ಯಾಣವ ಮಾಡಿಸಿ । ಪುಣ್ಯವ ತಾವ್ ಗಳಿಸಿಹರು ॥ ೪೨೪ ॥

ಹಲವಾರು ಪುಸ್ತಕಗಳನು ಬರೆದು ತಾವು । ಧರ್ಮಾರ್ತ್ಮರಿಂದ ಪ್ರಕಟಿಸಿ ।
ಜಿನವಾಣಿ ಸೇವೆಯ ಮಾಡುತಲಿರುವರು । ಸನ್ಮತಿ ಶಾಸ್ತ್ರಿಗಳವರು ॥ ೪೨೫ ॥

## ಶ್ರೀ ಇ. ವಿ. ಸುಬ್ರಹ್ಮಣ್ಯ ಅಯ್ಯರ್

ಪಾಲಕ್ಕಾಡಿನ ಸುಬ್ರಹ್ಮಣ್ಯಯ್ಯರು । ವಿದ್ಯಾರ್ಥಿ ನಿಲಯದಿ ನಿಂದು ।
ಕನ್ನಡದವರಂತೆ ಕನ್ನಡ ಕಲಿತು । ಕನ್ನಡ ಮಾತಾಡುತಿರ್ದರ್ ॥ ೪೨೬ ॥

ಜಿನಭಕ್ತಿ ಭಜನೆಯ ಬಹುಸುಂದರವಾಗಿ । ಹಾಡುತ ತಾವು ಹಾಡಿಸುತ ।
ವಿದ್ಯಾರ್ಥಿಗಳಿಂದ ಭಜನೆಯ ಹಾಡಿಸಿ । ವಿದ್ಯಾರ್ಥಿಗಳೊಳು ಬೆರೆತರು ॥ ೪೨೭ ॥

ಪ್ರಾತಃಕಾಲದ ನಾಲ್ಕು ಘಂಟೆಗೆ । ಘಂಟೆಯ ಹೊಡೆಯುತಲಿರ್ದರ್ ।
ಓಂ ಓಂ ಓಂ ಪಂಚಪರಮೇಷ್ಠಿ ಸ್ತೋತ್ರವ । ಹಾಡುತ ಲೇಳಿಸುತಿರ್ದರ್ ॥ ೪೨೮ ॥

ಸುಪ್ರಭಾತವ ಹಾಡಿ ವಿದ್ಯಾರ್ಥಿ ವೃಂದವ । ಎಚ್ಚರಿಸುತಲಿರ್ದ ಪರಿಯ ।
ವರ್ಣಿಸಲಾರೆನು ಮೂವತ್ತು ವರುಷದ । ಹಿಂದಿನ ಕಾಲದ ಸ್ಥಿತಿಯ ॥ ೪೨೯ ॥

ವಂದಿಸುವೆನು ಪ್ರಾತಃಕಾಲದ ಗುರುಗಳು । ಸುಬ್ರಹ್ಮಣ್ಯ ಗುರುಗಳಿಗೆ ।
ಸ್ಮರಿಸುವೆನು ಜಿನಗೀತೆಯ ಕಲಿಸಿದ ಧಾರ್ಮಿಕ ಸದ್ಗುರುಗಳಿಗೆ ॥ ೪೩೦ ॥

## ಪದುಮಯ್ಯನವರ ಧಾರ್ಮಿಕ ಮಿತ್ರರು

ಪಾಲ್ಗುಂದ ಶ್ರೀಮಂತ ಶ್ರೀ ನಾಗೇಗೌಡರು । ಪದುಮಯ್ಯನವರೊಡಗೂಡಿ ।
ಧರ್ಮಪ್ರಚಾರಕ ಪುಷ್ಠಿಯನಿತ್ತರು । ಧರ್ಮನಿಷ್ಠೆಯನು ಪಡೆದರ್ ॥ ೪೩೧ ॥

ದಾನವೀರ ಜಿನಚಂದ್ರರು ಗೌಡರ । ಪ್ರತ್ಯಕ್ಷ ದೇವರೆಂದೆನಿಸಿ ।
ಪದುಮಯ್ಯಗೌಡರ ಮಾತನು ಮೀರದೆ । ಧರ್ಮದಿಂ ನಡೆಯುತಲಿರ್ದರ್ ॥ ೪೩೨ ॥

ಮಣಿಯಂಗೂಡನಂತೇಗೌಡರು ತಮ್ಮಯ । ಪ್ರತಿ ಭಾಷಣದಲ್ಲಿ ಸ್ಮರಿಸಿ ।
ಪದುಮಯ್ಯ ಬೇರಲ್ಲ ಧರ್ಮವು ಬೇರಲ್ಲ। ವೆಂದು ತಾವ್ ಪೇಳುತಿರ್ದರ್ ॥ ೪೩೩ ॥

ಪುಡಿಯೂರ ಶ್ರೀ ಜಿನ್ನಗೌಡರು ಸಂತತ । ಪದುಮಯ್ಯರಲಿ ಒಡನಾಡಿ ।
ಧರ್ಮವನರಿತರು ವ್ರತವ ಪಾಲಿಸಿದರು । ಸಮಾಧಿ ಮರಣ ಪಡೆದರು ॥ ೪೩೪ ॥

ಹಾಸನದ ಹೆಚ್. ಡಿ. ಪುಟ್ಟಯ್ಯನವರನ್ನು । ಧರ್ಮಪ್ರೇಮಿಯೆಂದು ತಿಳಿದು ।
ಬೆಂಗಳೂರು ಕಾ.ಸ. ಧರಣೇಂದ್ರಯ್ಯನವರ । ಸಂತೋಷದಿಂದ ಸ್ಮರಿಸುತಿರ್ದರ್ ॥ ೪೩೫ ॥

ಮಂಗಳೂರಿನ ಎಂ. ಕೆ. ದೇವರಾಜರನ್ನು। ಆಗಾಗ್ಗೆ ಸ್ಮರಿಸುತಲಿರ್ದರ್ ।
ಕಾರ್ಕಳ ಶ್ರೀ ಪದ್ಮರಾಜ ವಕೀಲರ । ಆಗಾಗ್ಗೆ ನೆನೆಸುತಲಿರ್ದರ್ ॥ ೪೩೬ ॥

ಧರ್ಮಸ್ಥಳದ ಶ್ರೀ ಮಂಜಯ್ಯಹೆಗ್ಗಡೆ। ಯವರನು ಸದಾಕಾಲ ಸ್ಮರಿಸಿ ।
ಧರ್ಮವೆಂದರೆ ಮಂಜಯ್ಯ ಹೆಗ್ಗಡೆ। ಯವರು ' ಎಂದು ತಾ ಹೇಳುತಲಿರ್ದರ್ ॥ ೪೩೭ ॥

ಮೈಸೂರಿನ ಪದ್ಮರಾಜ ವಕೀಲರ । ಧಾರ್ಮಿಕ ಸ್ನೇಹವ ಬೆಳಸಿ ।
ಧರ್ಮಸಲಹೆ ನ್ಯಾಯಸಲಹೆಯ ಮೇರೆಗೆ। ನಿತ್ಯ ತಾವು ನಡೆಯುತಲಿರ್ದರ್ ॥ ೪೩೮ ॥

ವಿವೇಕಾಭ್ಯುದಯದ ಸಂಪಾದಕರು ಶ್ರೀ । ಡಿ. ಪುಟ್ಟಸ್ವಾಮಿಯವರು ।
ಪದುಮಯ್ಯಗೌಡರ ಸಹಪಾಠಿಗಳೆಂದು । ಪದುಮಯ್ಯ ಪೇಳುತಲಿರ್ದರ್ ॥ ೪೩೯ ॥

### ಪದುಮಯ್ಯನವರು ಮತ್ತು ವೀರೇಂದ್ರ ಹೆಗ್ಗಡೆಯವರ ಭೇಟಿ

ಅನ್ನದಾನದ ಮುಖ್ಯ ತಾಣವಾಗಿರುವ ಶ್ರೀ। ಧರ್ಮಸ್ಥಳದ ಹೆಗ್ಗಡೆಯರ್ ।
ಶ್ರೀ ರತ್ನವರ್ಮ ಹೆಗ್ಗಡೆಯವರು ತಾವು । ಸಮಾಧಿ ಮರಣವ ಪಡೆಯಲ್ ॥ ೪೪೦ ॥

ಹಿರಿಯ ಪುತ್ರರಾದ ಇಪ್ಪತ್ತು ವರುಷದ। ತರುಣ ವೀರೇಂದ್ರ ಹೆಗ್ಗಡೆಯವರ್ ।
ಪಟ್ಟವನೇರಿದರ್ ಧರ್ಮಾಧಿಕಾರಿಯ ಸ್ಥಾನವ ತಾವು ಗಳಿಸಿದರ್ ॥ ೪೪೧ ॥

ಸಾವಿರದೊಂಬೈನೂರರವತ್ತೆಂಟರ। ಸಮಯದಿ ಪದ್ಮೇಗೌಡರ್ ।
ಪಾಂದಿರಾಜಜ್ರೈಯರೊಡನೆ ಶ್ರೀ ವೀರೇಂದ್ರ । ಹೆಗ್ಗಡೆಯವರನು ಕಂಡರ್ ॥ ೪೪೨ ॥

ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆ। ಯವರನು ಬೆಂಗಳೂರಿನೊಳು ।
ಕಂಡರು ವೃದ್ಧ ಶ್ರೀ ಪದುಮಯ್ಯಗೌಡರು । ಧರ್ಮಚರ್ಚೆಯ ನಡೆಸಿದರು ॥ ೪೪೩ ॥

ತಮ್ಮಂಥ ತರುಣರಿಂದಲೇ ಧರ್ಮವು। ತಾನುದ್ಧಾರವಾಗಲು ಬೇಕು ।
ಧಾರ್ಮಿಕ ಕಾರ್ಯವನುತ್ಸಾಹದಿಂದಲಿ । ನಿತ್ಯ ತಾವ್ ಗೈಯ್ಯಲುಬೇಕು ॥ ೪೪೪ ॥

ವೃದ್ಧರಾದೆವು ನಾವು ಆಯುಷ್ಯವಿನ್ನಿಲ್ಲ । ಮರಣವು ಎಂದೊ ಗೊತ್ತಿಲ್ಲ ।
ತರುಣ ವೀರೇಂದ್ರರೆ ಧರ್ಮವ ನಡೆಸಿರಿ । ಎಂದರು ಪದುಮಯ್ಯಗೌಡರ್ ॥ ೪೪೫ ॥

ಸಂತಸದಿಂದಲಿ ಮುಗುಳ್ನಕ್ಕು ಶ್ರೀ । ವೀರೇಂದ್ರಹೆಗ್ಗಡೆಯವರು ತಾವು ।
ಪದುಮಯ್ಯನವರ ಧರ್ಮದ ಮಾತುಗಳನ್ನು । ಸಂತಸದೊಳು ಸ್ವೀಕರಿಸಿದರ್ ॥ ೪೪೬ ॥

## ಪದ್ಮಯ್ಯನವರಿಂದ ಮೈಸೂರಿನ ಚಿಕ್ಕಸಂಜೀವಯ್ಯನವರ ಮೇಲೆ ಧರ್ಮ ಪ್ರಭಾವನೆ

ಮೈಸೂರಿನ ಸಂಜೀವಯ್ಯರೆಂದೆಂಬ । ಶುಭವಾದ ನಾಮಾಂಕಿತದಿಂ ।
ಧರ್ಮಪಾಲರ ಜತೆ ವಿದ್ಯಾಭ್ಯಾಸವ ಗೈಯ್ಯು । ತಿರ್ದರು ಸಂಜೀವಯ್ಯ ॥ ೪೪೭ ॥

ಧಾರ್ಮಿಕ ಪ್ರೀತಿಯುಕಂಡರು ಪದುಮಯ್ಯ । ನವರು ಸಂಜೀವರಲ್ಲಿ ।
ಧರ್ಮಬೋಧೆಯು ಮಾಡಿದರು ಸತತವು । ಜಿನಧರ್ಮ ಕೈಹಿಡಿಸಿದರು ॥ ೪೪೮ ॥

ಧರ್ಮಪಾಲರು ಶಾಂತಿವರ್ಮರ ಜತೆಯಲಿ । ತೀರ್ಥಕ್ಷೇತ್ರವ ಸಂದರ್ಶಿಸುತಾ ।
ಪರಮಪೂಜ್ಯ ವಿದ್ಯಾನಂದ ಮುನಿಗಳ । ಪರಮ ಶಿಷ್ಯರಾಗಿ ಸೇರ್ದರ್ ॥ ೪೪೯ ॥

ಬ್ರಹ್ಮಚರ್ಯ ವ್ರತವ ಸ್ವೀಕರಿಸುತ್ತಲಿ । ಗುರು ವಿದ್ಯಾನಂದರ ಬಳಿಯೊಳ್ ।
ಶಾಸ್ತ್ರಾಭ್ಯಾಸವ ಮಾಡಿ ನಿರಂತರ । ಜಿನತತ್ವವನು ತಾವು ತಿಳಿದರ್ ॥ ೪೫೦ ॥

ಪದುಮಯ್ಯನವರಿಂದ ಧರ್ಮವ ಕಂಡೆನು । ಗೌಡರ್ಗೆ ನಾ ಚಿರ ಖುಣಿಯಉ ।
ಹೇಳುತಿಹರು ಸಂಜೀವಯ್ಯನವರು । ತುಂಬಿದ ಸಂತೋಷದಿಂದ ॥ ೪೫೧ ॥

## ಪದ್ಮಯ್ಯನವರ ಉಪಕಾರ ಸ್ಮರಣಾಗುಣ

ವೈನಾಡಿನೊಳು ಜಿನಧರ್ಮ ಬೋಧನೆಗೈದ । ಮಹಾನುಭಾವರುಗಳನು ।
ಸದಾಕಾಲ ಸ್ಮರಿಸುತಲಿರ್ದರು ಪದುಮಯ್ಯ । ಉಪಕಾರ ಸ್ಮರಣ ಗುಣಗಳಿಂ ॥ ೪೫೨ ॥

ಶ್ರೀ ನೇಮಿಸಾಗರ ವರ್ಣಿಜಿಯವರಿಂದ । ನಾವೆಲ್ಲ ಜಿನಧರ್ಮವರಿತೇವ್ ।
ಶ್ರೀ ಶ್ರೀಕಾಂತಶಾಸ್ತ್ರಿಗಳಿಂದ ಧರ್ಮದ । ರಹಸ್ಯವನು ತಿಳಿದುಕೊಂಡೇವ್ ॥ ೪೫೩ ॥

ಚಂದಪ್ಪನವರನು ಚಂದದಿ ಸ್ಮರಿಸುತ । ಲಿರ್ದರು ಪದುಮಯ್ಯನವರು ।
ನೀವೆಲ್ಲ ಜೈನರು ಜನಿವಾರ ಹಾಕಿರಿ । ಎಂದು ಚಂದಪ್ಪನವರೇಳುತಿರ್ದರ್ ॥ ೪೫೪ ॥

ಪೂಜಾಮಂತ್ರ ತಂತ್ರ ವಿಧಿ ವಿಧಾನವ । ಚಂದಪ್ಪನವರರಿತಿರ್ದರ್ ।
ಯಜ್ಞೋಪವೀತಧಾರಣೆ ಮಾಡಿಸಿ । ಪುನೀತರನ್ನಾಗಿಸಿದರ್ ॥ ೪೫೫ ॥

ಸರಗೂರು ಶ್ರೀ ಚಂದ್ರಸಾಗರಸ್ವಾಮಿಗಳ್ । ಬೆಣ್ಣೂಡು ಗ್ರಾಮದಿ ನೆಲಸಿ ।
ವೈನಾಡು ಜೈನರ ಜಾಗೃತಿಗೊಳಿಸಿದರ್ । ಧರ್ಮ ಪ್ರೇಮಿಗಳನ್ನಾಗಿಸಿದರ್ ॥ ೪೫೬ ॥

ಮಹಾಪುರಾಣವನೋದಿ ಅರ್ಥವ ಪೇಳಿ । ಜಿನಧರ್ಮ ಮಹತ್ವ ತಿಳಿದು ।
ಜಿನಧರ್ಮದಿಂ ಬಾಳಲು ಪೇಳುತಿರ್ದರು । ಉಪಕಾರಿ ಅಯ್ಯಂಗಾರ್ಯರ್ ॥ ೪೫೭ ॥

ಯಾರದೇ ಉಪಕಾರವನ್ನು ತಾವ್ ಮರೆಯದೆ। ಪದುಮಯ್ಯ ಸ್ಮರಿಸುತಲಿರ್ದರ್ ।
ಉಪಕಾರಸ್ಮರಣೆಯ ಸ್ಮರಿಸುವ ಗುಣವನು। ಪದುಮಯ್ಯ ತಾವ್ ಪಡೆದಿರ್ದರ್
॥ ೪೫೮ ॥

ಅಣುಮಾತ್ರದುಪಕಾರವನ್ನು ಪರ್ವತದಂತೆ । ಪದುಮಯ್ಯ ಭಾವಿಸುತಿರ್ದರ್ ।
ಬೆಟ್ಟದಷ್ಟುಪಕಾರವನ್ನಾ ಪದುಮಯ್ಯ । ಕ್ಷಣದಲಿ ಮರೆಯುತಿರ್ದರ್ ॥ ೪೫೯ ॥

ಚಂದಪ್ಪನವರ ಸತ್ಪುತ್ರ ಪದ್ಮನಾಭಶರ್ಮ । ಶಾಸ್ತ್ರಿಗಳೊಡಗೂಡಿ ।
ಧರ್ಮಚರ್ಚೆಯ ಮಾಡಿ ತಿಳಿಯುತಲಿರ್ದರು । ಧಾರ್ಮಿಕ ಪದ್ಮಯ್ಯನವರು ॥೪೬೦॥

ಆಸ್ಥಾನವಿದ್ವಾನ್ ಶ್ರೀ ನಾಗರಾಜ । ಶಾಸ್ತ್ರಿಗಳನು ಭಕ್ತಿಯಿಂದ ।
ಕಾಣುತಲಿರ್ದರು ಶ್ರೀ ಪದುಮಯ್ಯ । ಶಾಸ್ತ್ರದ ಸದ್ಭಕ್ತಿಯಿಂದ ॥೪೬೧॥

ಶಾಸ್ತ್ರವ ತಿಳಿದಂಥ ಎಲ್ಲಾ ಶಾಸ್ತ್ರಿಗಳನ್ನು । ಗೌರವದಿಂ ಕಾಣುತಿರ್ದರ್ ।
ಶಾಸ್ತ್ರಿಗಳ್ ಬಂದರೆ ಶಾಸ್ತ್ರದ ಚರ್ಚೆಯ । ಸಂತೋಷದಿಂ ಗೈಯ್ಯುತಿರ್ದರ್ ॥೪೬೨॥

## ಮೈಸೂರಿನಲ್ಲಿ ಧಾರ್ಮಿಕ ಚಟುವಟಿಕೆ

ಮೈಸೂರಿನೊಳು ಧರ್ಮಬೋಧನೆ ಮಾಡಲು । ಮನೆಮನೆಗೂ ತಾವು ತಿರುಗಿ ।
ಧರ್ಮಧರ್ಮವೆಂದು ಪೇಳುತಲಿರ್ದರು । ಧಾರ್ಮಿಕ ಪದುಮಯ್ಯನವರು ॥೪೬೩॥

ವರ್ಧಮಾನ ವಿದ್ಯಾರ್ಥಿ ನಿಲಯದೊಳು । ಆಗಾಗ್ಗೆ ಧರ್ಮವ ಪೇಳಿ ।
ವಿದ್ಯಾರ್ಥಿಗಳನು ಧರ್ಮಮಾರ್ಗಕ್ಕೆಳೆದರು । ಧಾಮಿಕ ಪದುಮಯ್ಯನವರು ॥೪೬೪॥

ಉನ್ನತ ಸರಕಾರಿ ಅಧಿಕಾರಿಯಾಗಿರ್ದ । ಎ. ಎನ್. ಚಂದ್ರಕೀರ್ತಿಯವರು ।
ವರ್ಧಮಾನ ವಿದ್ಯಾರ್ಥಿ ನಿಲಯದೊಳು । ವಿದ್ಯಾಭ್ಯಾಸವ ಗೈಯುತಿರ್ದರ್ ॥೪೬೫॥

ವಿದ್ಯಾರ್ಥಿಗಳನೆಲ್ಲಾ ಒಂದೆಡೆ ಸೇರಿಸಿ । ಶ್ರೀ ಪದ್ಮಯ್ಯನವರಿಂದ ।
ಧರ್ಮದ ತತ್ವವ ಪೇಳಿಸುತಿರ್ದರು । ಧಾರ್ಮಿಕ ಶ್ರೀ ಚಂದ್ರಕೀರ್ತಿ ॥೪೬೬॥

ಶಾಂತಿನಾಥಸ್ವಾಮಿ ಜಿನಮಂದಿರದೊಳು । ಶ್ರೀ ಪದುಮಯ್ಯನವರುಗಳ್ ।
ಧಾರ್ಮಿಕ ಶಾಲೆಗೆ ಸಹಕರಿಸುತ್ತಲಿ । ತತ್ವವ ಪೇಳುತಲಿರ್ದರ್ ॥೪೬೭॥

ವಿ. ಎಸ್. ಧರಣೇಂದ್ರಯ್ಯ ಇಂದ್ರಕುಮಾರರು । ಧಾರ್ಮಿಕ ಶಾಲೆಯ ನಡೆಸಿ ।
ಬಾಲಕ ಬಾಲಕಿ ಸ್ತ್ರೀಪುರುಷರುಗಳನು । ಧಾರ್ಮಿಕರನ್ನಾಗಿಸಿದರು ॥ ೪೬೮ ॥

ಧಾರ್ಮಿಕಶಾಲೆಗೆ ಸಹಾಯಧನವಿತ್ತು । ಪದುಮಯ್ಯನವರ್ ತಾವೇ ನಿಂತು ।
ಧಾರ್ಮಿಕಬೋಧನೆ ಮಾಡುತಲಿರ್ದರು । ಧಾರ್ಮಿಕ ಪದುಮಯ್ಯನವರು ॥ ೪೬೯ ॥

ಸಿ. ಎನ್. ಬ್ರಹ್ಮಪ್ಪ ಮಹಾನುಭಾವರು । ಪಾಯಮ್ಮನವರೊಡಗೂಡಿ ।
ಪದುಮಯ್ಯನವರಲಿ ಧಾರ್ಮಿಕ ಚರ್ಚೆಯ । ಸತತವು ಗೈಯ್ಯುತಲಿರ್ದರ್ ॥ ೪೭೦ ॥

## ಪದ್ಮಯ್ಯನವರ ಚರಿತ್ರೆ ಬರೆಯಲು ಪ್ರೇರಣೆ

ಕೇರಳ ವೈನಾಡು ಕುನ್ನಂಬೆಟ್ಟದ । ಎಂ. ಪಿ. ಸಿ. ಜೈನರ ಪುತ್ರರ್ ।
ಪದ್ಮರಾಜರು, ಸುರೇಂದ್ರಕುಮಾರರು । ಧಾರ್ಮಿಕದಿಂ ಬಾಳುತಿಹರು ॥ ೪೭೧ ॥

ಸಹೋದರದ್ವಯರ್ ಆಗಾಗ್ಗೆ ಶ್ರೀ । ಸಿದ್ಧಕ್ಷೇತ್ರ ದರುಶನ ಮಾಡುತಿಹರ್ ।
ಧರ್ಮೋಪದೇಶವ ತಪ್ಪದೆ ಕೇಳುವ । ಹವ್ಯಾಸವಿರಿಸಿಕೊಂಡಿರುವರ್ ॥ ೪೭೨ ॥

ಪದುಮಯ್ಯಗೌಡರ ಮಹದುಪಕಾರವ । ಸ್ಮರಿಸುತ ಸಹೋದರದ್ವಯರು ।
ಪದುಮಯ್ಯನವರ ಜೀವನ ಚರಿತ್ರೆ । ಬರೆಯಲು ಪ್ರೇರೇಪಿಸಿದರು ॥ ೪೭೩ ॥

ಎಷ್ಟೇ ಧನವ್ಯಯವಾಗಲಿ ಕೊಡುವೆನೆಂದರು । ಶ್ರೀ ಎಂ. ಸಿ. ಪದ್ಮರಾಜರ್ ।
ರವೀಂದ್ರಕುಮಾರರ್ ಸಹಕರಿಸುವೆನೆಂದು । ಸಂತೋಷದಿಂದ ಪೇಳಿದರು ॥ ೪೭೪ ॥

ಧಾರ್ಮಿಕ ಜೀವಿಯ ಚರಿತೆಯು ಪುಸ್ತಕ । ರೂಪದೊಳು ಬರಬೇಕು ।
ಧಾರ್ಮಿಕ ಜೀವಿಯ ನೆನೆಯಲು ಪುಸ್ತಕ । ಮನೆಮನೆಯನು ಸೇರಬೇಕು ॥ ೪೭೫ ॥

ಪದುಮಯ್ಯನವರಿಂದ ಉಪಕೃತನಾಗಿರ್ದು । ಧರ್ಮರಹಸ್ಯವ ತಿಳಿದೇ ।
ಉಪಕಾರ ಋಣವನು ತೀರಿಸಲ್ ಪದುಮಯ್ಯ । ಗೌಡರ ಚರಿತೆಯ ಬರೆದೆ ॥ ೪೭೬ ॥

ಋಣವೆಂದರೆ ಧನ ಅನ್ನದ ಋಣವೆಂದು । ಅತಿಯಾಗಿ ಭಾವಿಸಬೇಡಿ ।
ಧರ್ಮದ ಋಣವನು ಧರ್ಮದ ಮಾರ್ಗದಿ । ತೀರ್ಪುದೇ ಋಣ ಪರಿಹಾರ ॥ ೪೭೭ ॥

ಕಲಿತ ವಿದ್ಯೆಯನ್ನು ಶಿಷ್ಯರಿಗೆ ತಿಳಿಪುದೇ । ಗುರುವಿನ ಋಣ ಪರಿಹಾರ ।
ಧಾರ್ಮಿಕ ಜನಗಳ ಗುಣವ ಪೊಗುಳ್ವುದೇ । ಧರ್ಮದ ಋಣಪರಿಹಾರ ॥ ೪೭೮ ॥

ಉಪಕಾರ ಸ್ಮರಣೆಯ ಗೈಯ್ಯುವ ಸಲುವಾಗಿ । ಪದುಮಯ್ಯಗೌಡರ ಚರಿತೆಯ ।
ಬರೆದೆನು ಹರುಷದಿಂ ಧರ್ಮಾತ್ಮನೊಬ್ಬನ । ಚರಿತೆಯು ಸ್ಥಿರವಾಗಲೆಂದು ॥ ೪೭೯ ॥

ಚರಿತೆಯ ಬರೆಸಿದ ಶ್ರೀ ಪದ್ಮರಾಜ । ರವೀಂದ್ರರ ನಾ ಸ್ಮರಿಸುವೆನು ।
"ನಧರ್ಮೋಧಾರ್ಮಿಕೈರ್ವಿನ್" ಎಂದೆಂಬ । ವಾಕ್ಯವ ನಾ ನಮಿಸುವೆನು ॥ ೪೮೦ ॥

## ಪದ್ಮಯ್ಯನವರ ದೇಹಾವಸಾನ

ಸಾವಿರದೊಂಬೈನೂರರವತ್ತೊಂ । ಬತ್ತನೇ ಇಸವಿಯೊಳು ।
ಡಿಸಂಬರ್ ತಿಂಗಳ ಹನ್ನೆರಡನೇ ದಿನ । ಶುಕ್ರವಾರದ ದಿನದಂದು ॥ ೪೮೧ ॥

ಪದುಮಯ್ಯಗೌಡರು ಸಮಾಧಿ ಮರಣದಿ । ದೇಹಾವಸಾನವ ಗೈದರ್ ।
ಧಾರ್ಮಿಕ ಜೀವಿಯು ಕಣ್ಮರೆಯಾಯಿತು । ವೈನಾಡು ತಬ್ಬಲಿಯಾಯ್ತು ॥ ೪೮೨ ॥

ಮರಣವ ಹೊಂದುವ ಮೂರು ದಿನಕೆ ಮುಂಚೆ । ಕೊಯ್ನಂಗಾಡ್ ಭಾವನ ಗೃಹದೊಳ್ ।
ಸಾಂಸಾರಿಕ ಶುಭಕಾರ್ಯದಿ ಧರ್ಮದ । ಉಪದೇಶವನು ಕೊಡುತಿರಲು ॥ ೪೮೩ ॥

ಅತಿಥಿಗಳಿಗೆ ಭೋಜನವನು ಗೈಸಿದ । ಶ್ರೀ ವಜ್ರನಾಭಯ್ಯಗೌಡರ್ ।
ಅತಿಯಾದ ಆನಂದದಿ ಪದುಮಯ್ಯಗೌಡರ್ಗೆ । ಧರ್ಮವ ತಿಳುಹಲು ಬೇಡ್ದರ್ ॥ ೪೮೪ ॥

ಧರ್ಮೋಪದೇಶದ ಸಮಯದಿ ಗೌಡರ್ಗೆ । ಲಘು ಹೃದಯಾಘಾತವಾಯ್ತು
ಧರ್ಮಬೋಧನೆಯ ಗೈಯ್ಯುತಲಿದ್ದ ಗೌಡರ್ಗೆ । ಕಾಲನ ಕರೆಯು ಬಂತು ॥ ೪೮೫ ॥

ವೈದ್ಯರು ಬಂದರು ವಿಶ್ರಾಂತಿ ಪಡೆಯಿರಿ । ಎಂದೆಂಬ ಸಲಹೆಯನಿತ್ತರ್ ।
ವಿಶ್ರಾಂತಿ ಪಡೆಯುವ ಸಮಯದಿ ಎರಡನೇ । ದೊಡ್ಡ ಹೃದಯಘಾತವಾಯಿತು ॥ ೪೮೬ ॥

ಸೇರಿದ ಜನರೆಲ್ಲ ಪದುಮಯ್ಯಗೌಡರ । ಬಳಿ ತಾವು ಬಂದು ನಿಂತರ್ ।
ಕಣ್ಣೀರು ಸುರಿಸುತ ಧರ್ಮೋಪದೇಶವ । ಹೇಳುವವರ್ಯಾರೆಂದು ಕರೆದರ್ ॥ ೪೮೭ ॥

ಬಂದಂಥ ಜನಗಳು ಕಣ್ಣೀರು ಸುರಿಸುತ । ಪದುಮಯ್ಯನವರ ಕೊಂಡಾಡಿ ।
ಧರ್ಮವ ತಿಳಿಸುವರ್ಯಾರೆಂದು ನಮಗೆಲ್ಲಾ । ಕಣ್ಣೀರ ಕೋಡಿ ಹರಿಸಿದರ್ ॥ ೪೮೮ ॥

ಅತಿಯಾದ ವೇದನೆಯಿಂದಲಿ ಬಳಲುತ । ಲಿರ್ದರು ಪದುಮಯ್ಯಗೌಡರ್ ।
ದೇಹ ಬೇರೆ ಆತ್ಮ ಬೇರೆಂಬ ಭಾವನೆಯನು । ಸತತವು ಭಾವಿಸುತಿರ್ದರ್ ॥ ೪೮೯ ॥

ಸಮಾಧಿಮರಣವ ಗೈಸಲು ಶ್ರಮಿಸಿದರ್ । ಧರ್ಮಪಾಲ ಶಾಂತಿವರ್ಮರ್ ।
ಜಿನಭಗವಾನರ ಪಟವನು ಹಿಡಿದು । ಜಿನದರುಶನ ಮಾಡಿಸಿದರು ॥ ೪೯೦ ॥

ಪಂಚಮಂತ್ರದ ಜಪದುಪದೇಶ ಗೈದರು ! ಭಕ್ತಿ ಭಾವದಿಂದ ಜನರು ।
ಉಚ್ಛಸ್ವರದಿ ಪಂಚಮಂತ್ರವ ಹೇಳಿದರ್ । ಶ್ರೀ ಶಾಂತಿವರ್ಮ ಜೈನರ್ ॥ ೪೯೧ ॥

ವರ್ಧಮಾನರ ಪತ್ನಿ ಲಲಿತಕುಮಾರಿಯರ್ । ಶಾಂತಿವರ್ಮರ ಜತೆಗೂಡಿ ।
ಉಚ್ಛ ಸ್ವರದೊಳು ಶ್ರೀ ಪಂಚಮಂತ್ರವ । ಕಿವಿಯೊಳು ಪೇಳುತಲಿರ್ದರ್ ॥ ೪೯೨ ॥

ಸೀಮಂಧರ ಸ್ವಾಮಿಯನ್ನು ನೆನಸಿಕೊಳ್ಳಿ । ರೆಂದರು ಸುತ ಶಾಂತಿವರ್ಮರು ।
ಸಮವಸರಣವನ್ನು ಜ್ಞಾಪಿಸಿಕೊಳ್ಳಿರಿ । ಜಿನನನ್ನು ಕಣ್‌ತುಂಬಾ ನೋಡಿ ॥ ೪೯೩ ॥

ದುಃಖವೇದನೆಯಿಂದ ಆಕಡೆ ಈಕಡೆ । ಹೊರಳುತಿದ್ದರ್ ಪದುಮಯ್ಯನವರು ।
ಎತ್ತೆತ್ತ ತಿರುಗಲು ಶ್ರೀ ಜಿನದೇವನ । ದರುಶನ ಮಾಡಿಸುತಿದ್ದರ್ ॥ ೪೯೪ ॥

ಅಪ್ಪಾಜಿ ಶ್ರೀ ಜಿನಪಟವನ್ನು ನೋಡಿರಿ । ಎನ್ನುತಿದ್ದರ್ ಶ್ರೀ ಶಾಂತಿವರ್ಮರ್ ।
ಬಂಧುವರ್ಗವೆಲ್ಲ ಹೇಳುತಿದ್ದರ್ । ಜಿನನನ್ನು ಕಣ್ತುಂಬ ನೋಡಿಯೆನ್ನುತ ॥ ೪೯೫ ॥

ಲಲಿತಕುಮಾರಿಯು ಶ್ರೀ ಶಾಂತಿವರ್ಮರು । ಬಿಡದೆ ಪಂಚಮಂತ್ರವ ಪಠಿಸಿ ।
ಪದುಮಯ್ಯಗೌಡರ ಸಮಾಧಿಮರಣಕ್ಕೆ । ಕಾರಣ ಕರ್ತೃಗಳಾದರ್ ॥ ೪೯೬ ॥

ಶುಕ್ರವಾರ ಶುಭದಿನದಂದು ಪದುಮಯ್ಯ । ನವರು ಮರಣವನಪ್ಪಿದರು ।
ಸಮಾಧಿ ಮರಣದಿ ದೇಹತ್ಯಾಗವ ಗೈದು । ದೇವಲೋಕದಿ ಜನಿಸಿದರು ॥ ೪೯೭ ॥

ಅತಿ ಪುಣ್ಯಫಲದಿಂದ ದೇವಪರ್ಯಾಯದಿ । ಜನಿಸಿದರ್ ಪದುಮಯ್ಯಗೌಡರ್ ।
ಆಸನ್ನ ಭವ್ಯರಾಗಿ ಮೋಕ್ಷಲಕ್ಷ್ಮಿಯ । ವರಿಸಿ ಸಿದ್ಧಾತ್ಮರಾಗುವರು ॥ ೪೯೮ ॥

ಪಾರ್ಥಿವ ಶರೀರವ ಕೂಟಮಂಡಕೆ । ಕೊಂಡೊಯ್ದರು ಬಂಧು ಜನರು ।
ಹಿರಿಯರಾಗಿಹ ಪುತ್ರ ಶ್ರೀ ಧರ್ಮಪಾಲರು । ಅಂತ್ಯ ಸಂಸ್ಕಾರವ ಗೈದರ್ ॥ ೪೯೯ ॥

ಹನ್ನೆರಡನೇ ದಿನ ಉತ್ತರಕ್ರಿಯೆಯ । ಮಾಡಿದರ್ ಸತ್ಪುತ್ರದ್ವಯರು ।
ಬಂದಂಥ ಜನರಿಗೆ ಧರ್ಮೋಪದೇಶವ । ಚಂದದಿ ತಾವು ಮಾಡಿಸಿದರ್ ॥ ೫೦೦ ॥

ಹೊಂಬುಜ ಜಗದ್ಗುರು ಶ್ರೀ ದೇವೇಂದ್ರಕೀರ್ತಿಗಳ್ । ಶ್ರೀ ಆದಿರಾಜ ಶಾಸ್ತ್ರಿಗಳ ।
ಕಳುಹಿಸಿ ಉತ್ತರಕ್ರಿಯೆಯ ಸಮಯದಿ । ಧರ್ಮೋಪದೇಶ ಗೈಸಿದರು ॥ ೫೦೧ ॥

ಸಂತಾಪಾಶೀರ್ವಾದವ ಕಳುಹಿಸಿ । ಗೌಡರ ಸೇವೆ ಸ್ಮರಿಸಿದರ್ ।
ಧರ್ಮಾತ್ಮ ಜೀವರು ಜನನ ಮರಣದೊಳು । ಧರ್ಮವ ಬಿಡದಪ್ಪುವರು ॥ ೫೦೨ ॥

ಹೊಂಬುಜ ಗುರುಗಳ ಸಂತಾಪಾ । ಶೀರ್ವಾದ ತಿಳಿಸಿ ಶಾಸ್ತ್ರಿಗಳು ।
ಧರ್ಮೋಪದೇಶವಗೈದರು ಶಾಸ್ತ್ರಿಗಳ್ । ಹೊಂಬುಜದಮ್ಮನ ನೆನೆದರ್ ॥ ೫೦೩ ॥

ಪದುಮಯ್ಯಗೌಡರು ಪೊಂಬುಜಕ್ಷೇತ್ರಕೆ । ಗೈದಸೇವೆಯ ಮನಗಂಡು ।
ವಿಶೇಷಪೂಜೆಯ ಗೈಸಿದರ್ ಸ್ವಾಮಿಗಳ್ । ಪಾರ್ಶ್ವಜಿನ ಪದ್ಮಾವತಿಗೆ ॥ ೫೦೪ ॥

ಪೊಂಬುಜ ಗುರುಗಳು ಆಶೀರ್ವದಿಸಿದರ್ । ಪದುಮಯ್ಯನವರಾತ್ಮನಿಗೆ ।
ಧರ್ಮದಿಂಬಾಳಿದ ಶ್ರೀ ಜಿನಭಕ್ತಿಗೆ । ಶಾಂತಿ ಸುಖವು ಸಿಗಲೆಂದು ॥ ೫೦೫ ॥

ಧರ್ಮಭಾರವನೊತ್ತ ಹಿರಿಯಳಿಯಂದಿರು । ಶ್ರೀ ಮದನಕೇಸರಿಯವರು ।
ಕಣ್ಣೀರ ಹರಿಸುತ ಧರ್ಮವ ತಿಳಿಸಿದರ್ । ಮಾವನವರ ನೆನೆಸುತಲಿ ॥ ೫೦೬ ॥

ಶ್ರೀ ಲೋಕಪಾಲಶ್ರೀ ಶ್ರೀಕಾಂತಶಾಸ್ತ್ರಿಗಳ್ । ಧರ್ಮೋಪದೇಶವನ್ನಿತ್ತರ್ ।
ರಾಜಕಾರಣಿ ವೀರೇಂದ್ರಕುಮಾರರು । ಪದುಮಯ್ಯನವರ ಕೊಂಡಾಡಿದರ್ ॥ ೫೦೭ ॥

ಸಾವಿರದೊಂಬೈನೂರಅರವತ್ತೊಂಬತ್ತರ । ಡಿಸಂಬರ್ ಮಾಸದೊಳು ।
ಹನ್ನೆರಡನೆಯ ತಾರೀಖಿನ ಶುಕ್ರ । ವಾರದ ಶುಭದಿನದಂದು ॥ ೫೦೮ ॥

ಸಾಯಂಕಾಲದ ಏಳುಗಂಟೆ । ಇಪ್ಪತ್ತು ನಿಮಿಷದೊಳು ।
ಶ್ರೀ ಪದುಮಯ್ಯ ನಾಮಾಂಕಿತ ಜೀವವು । ಇಹಲೋಕವನು ತ್ಯಾಗಗೈಯ್ಯು ॥ ೫೦೯ ॥

ಸಮಾಧಿಮರಣದಿ ದೇಹವ ಬಿಟ್ಟರು । ಶ್ರೀ ಸಮ್ಯಕ್ ಪದ್ಮಯ್ಯನವರು ।
ಪಂಚಣಮೋಕ್ಕಾರ ಮಂತ್ರವ ಕೇಳುತ । ಸ್ವರ್ಗಕ್ಕೆ ತಾವೇರಿದರು ॥ ೫೧೦ ॥

ಧಾರ್ಮಿಕ ಜೀವಿಯು ಜನನ ಮರಣಗಳು । ಧರ್ಮಕ್ಕೆ ನೆರವಾಗುವವು ।
ಪದುಮಯ್ಯಗೌಡರ ಮರಣನಿಮಿತ್ತವು । ಧರ್ಮಪ್ರಭಾವನೆಗಾಯ್ತು ॥ ೫೧೧ ॥



## ಪದುಮಯ್ಯನವರ ವಿಶಿಷ್ಠ ಗುಣ ಮತ್ತು ಧರ್ಮೋಪದೇಶ

ಯಾರದೇ ಮನೆಗೆ ಧರ್ಮವ ಹೇಳಹೋದರು । ಯಾವುದೇ ಕಷ್ಟ ಕೊಡದೆ।
ನಮಗಾಗಿ ತೊಂದರೆ ತೆಗೆದುಕೊಳ್ಳಬೇಡಿ । ಎನ್ನುತ್ತಿದ್ದರ್ ಪದುಮಯ್ಯನವರು॥೫೧೨॥

ಹುಲ್ಲಿನಮನೆಯಾಗಿರಲಿ ಹೆಂಚಿನ ಮನೆ। ಯಾಗಲಿ ಜೋಪಡಿಯಾಗಲಿ ।
ಬಂಗ್ಲೆಯಾಗಲಿ ಸೌಧವಾಗಲಿ ಪದುಮಯ್ಯ । ಸಂತೋಷದಿಂ ಪೋಗುತಿರ್ದರ್ ।೫೧೩॥

ನೆಲದ ಮೇಲಾಗಲಿ ಚಾಪೆಯ ಮೇಲಾಗಲಿ । ಗೋಣಿಚೀಲದ ಮೇಲಾಗಿರಲಿ ।
ಕುಳಿತು ಪದುಮಯ್ಯನವರು ಧರ್ಮವ । ನಯವಾಗಿ ಪೇಳುತಲಿರ್ದರ್ ॥ ೫೧೪ ॥

ಕಿರಿಯವರಾಗಲಿ ಹಿರಿಯವರಾಗಲಿ । ನೀವು ಎಂದೇ ಕರೆಯುತಿರ್ದರ್ ।
ಮಾತಿನಿಂದಲೇ ಧರ್ಮ ಮಾತಿನಿಂದಲೇ ಕರ್ಮ। ಕಟ್ಟುವುದೆನ್ನುತಲಿದ್ದರ್ ॥ ೫೧೫ ॥

ಬಹುವಚನದಲಿ ಮಾತನಾಡುವ ರೀತಿಯನು । ಪದುಮಯ್ಯನವರಲಿ ಕಲಿಯಬೇಕು ।
ಐಶ್ವರ್ಯವಿದ್ದರೂ ಇಲ್ಲದವರ ಹಾಗೆ। ಬಾಳುವುದ ತಿಳಿಯಲು ಬೇಕು ॥ ೫೧೬ ॥

ಕನ್ನಡ ಭಾಷೆ ನಮ್ಮದು । ನಾವೆಲ್ಲ ಮಾತನಾಡಬೇಕು ।
ಎನುತಿದ್ದರ್ ಪದುಮಯ್ಯನವರು ಮನೆಯಲ್ಲಿ। ಮಲೆಯಾಳ ಮಾತನಾಡಿದವರಿಗೆ
॥ ೫೧೭ ॥

ಕನ್ನಡ ಭಾಷೆಯ ಧಾರ್ಮಿಕ ಪುಸ್ತಕ। ವನ್ನು ನಾವ್ ಓದಲುಬೇಕು ।
ಧಾರ್ಮಿಕ ಗ್ರಂಥಗಳ ಸ್ವಾಧ್ಯಾಯ ಮಾಡಲು । ಕನ್ನಡ ಕಲಿಯಬೇಕು ॥ ೫೧೮ ॥

ಪ್ರಾತಃಕಾಲದೊಳೆದ್ದು ಪಂಚಣಮೋಕ್ಕಾರ । ಮಂತ್ರವ ಪಠಿಸಿರಿ ನೀವು ।
ಸ್ನಾನವಮಾಡಿ ಜಿನೇಂದ್ರನ ಪೂಜೆಯ । ಭಾವ ಭಕ್ತಿಯೊಳು ನೀವ್ ಮಾಡಿ ।೫೧೯॥

ಶುಭ ಭಾವನೆಯಿಂದ ಒಂದೆರಡು ಪುಷ್ಪವ। ಶ್ರೀ ಜಿನೇಶ್ವರನಿಗೆ ಅರ್ಪಿಸಲು ।
ಕಷ್ಟವು ಹೋಗಿ ಸುಖವು ಸಿಗುವುದೆಂದು। ಪದುಮಯ್ಯನವರ್ ಹೇಳುತಿದ್ದರ್।೫೨೦॥
ಯಾವುದೇ ಕಷ್ಟವು ಬಂದರೂ ನೂರೆಂಟು । ಮಂತ್ರಪುಷ್ಪವ ನರ್ಪಿಸಲು ।
ಕಷ್ಟವು ಹೋಗಿ ಸುಖವು ಸಿಗುವುದು । ಎನ್ನುತಿದ್ದರ್ ಪದುಮಯ್ಯನವರು ।೫೨೧॥

ಜಲ ಗಂಧಾಕ್ಷತೆ ಪುಷ್ಪ ಚರು ದೀಪ। ಧೂಪ ಫಲಾರ್ಘ್ಯಗಳಿಂದ ।
ಕೈಯೊಳಗಿಟ್ಟು ತಾ ಪೂಜೆಯಗೈಯುವ್ವದೇ। ದ್ರವ್ಯಪೂಜೆಯೆನುತಿದ್ದರ್ ॥ ೫೨೨ ॥

ದ್ರವ್ಯಪೂಜೆ ಭಾವಪೂಜೆಯಾಗಲಿ ಶುಭ। ಭಾವದಿಂದಲಿ ಗೈಯ್ಯಬೇಕು ।
ಸಾಂಸಾರಿಕ ದುಃಖದಾರಿದ್ರ್ಯ ಹರಿವುದು ಭಗವಂತನ ಪೂಜೆಯಿಂದ ॥ ೫೨೩ ॥

ಶುಭಭಾವವನು ಮಾಡಿ ಧರ್ಮಚಿಂತನೆ ಮಾಡಿ | ಪುಣ್ಯವ ನೀವು ಗಳಿಸಿರಿ |
ಪುಣ್ಯದಿಂದಲೇ ಸುಖವೆನುತಿದ್ದರ್ ಪದುಮಯ್ಯ | ಗೌಡರು ಸಂತೋಷದಿಂದ ॥೫೨೪॥

ಪಾಪಕರ್ಮವ ಮಾಡಿ ಪಾಪಕರ್ಮವ ಕಟ್ಟಿ | ಪಾಪಿಗಳಾಗಬೇಡಿ |
ಪಾಪಕರ್ಮದ ಫಲ ರೋಗರುಜಿನವೆಂದು | ಸತತವು ಪೇಳುತಲಿರ್ದರ್ ॥೫೨೫॥

'ಅರಹಂತನೇ ಸ್ಮರದೂರನೆ' ಅಷ್ಟವಿಧಾರ್ಚನ | ಪೂಜಾ ಪದ್ಯವನು |
ಪರಿಚಯಿಸಿ ಪದುಮಯ್ಯನವರು ಭಾವ | ದ್ರವ್ಯಪೂಜೆಯ ಕಲಿಸಿದರು ॥೫೨೬॥

'ಭಾವಜವಿಜಯನೆ ಪಾಲಿಸೆನ್ನನು ಬೇಗ | ನಂಬಿದೆ ನಿಮ್ಮಯ ಚರಣ' |
'ನೆರೆಪೂಜಿಪೆ ನಿನ್ನ' ಪೂಜೆಯ ಪದ್ಯವ | ಜನಕೆ ಪ್ರಚಾರವಗೈಯ್ದರ್ ॥೫೨೭॥

'ಅರಸಿರಿ ಅರತನು ಧನಪುತ್ರರು' | ಆರಿಗೂ ಸ್ಥಿರವಲ್ಲವೆಂಬ |
ವೈರಾಗ್ಯಪದ್ಯವ ಪೇಳುತಲಿದ್ದರು | ಬಾರಿಬಾರಿಗೂ ಭಕ್ತಿಯಿಂದ ॥೫೨೮॥

'ಶಾಂತಿಜಿನೇಂದ್ರರ ಚರಣವ ನಂಬಿರಿ' | ಎಂಬ ಪದ್ಯವ ತಾವು ನಿತ್ಯ |
ಸಂತೋಷದಿಂದಲಿ ತಾವ್ ಪೇಳುತಿದ್ದರು | ಶಾಂತಿಜಿನನ ಪ್ರೀತಿಯಿಂದ ॥೫೨೯॥

ಜಿನಭಜನೆಸಾರದ ಪದ್ಯಗಳನ್ನು | ನಿತ್ಯವು ಹಾಡಬೇಕೆಂದು |
ಜನಕೆಲ್ಲ ಪೇಳುತಲಿರ್ದರು ಪದುಮಯ್ಯ | ಜಿನಭಜನೆಯ ಪ್ರೇಮದಿಂದ ॥೫೩೦॥

ರತ್ನಾಕರ ಶತಕವನು ತಾವ್ ಹಾಡುತ | ಹಾಡಿಸುತ ಭಕ್ತಿಯಿಂದ |
ರತ್ನಾಕರನನ್ನು ನೆನೆಯುತಲಿದ್ದರು | ತ್ರೈರತ್ನ ಪದುಮಯ್ಯನವರು ॥೫೩೧॥

## ಪದುಮಯ್ಯನವರ ಚರಿತ್ರೆ ಬರೆಯಲು ಸ್ಫೂರ್ತಿ–ಗುರುಗಳಾಶೀರ್ವಾದ

ಪದುಮಯ್ಯಗೌಡರ ಚರಿತೆಯ ಬರೆಯಲು | ಪ್ರೇರಣೆ ಸ್ಫೂರ್ತಿಯಗೈದ |
ಪೊಂಬುಜ ಪದ್ಮಾವತಮ್ಮನ ನೆನೆಯುತಾ | ಪೊಂಬುಜ ಕ್ಷೇತ್ರಕೆ ವಂದಿಸುವೆ ॥೫೩೨॥

ಪಾರ್ಶ್ವನಾಥನ ಶ್ರೀ ಪದುಮಾಂಬೆಯ | ಭಕ್ತಿಯಿಂ ನಾ ಸ್ತುತಿಗೈದು |
ಮುತ್ತಿನ ಕೆರೆಯಿಂದ ಲಕ್ಕಿಯ ಮರದಿಂದ | ಪ್ರಖ್ಯಾತಳಾದವಳ ನೆನೆವೆ ॥೫೩೩॥

ಸಿಂಹತೀರ್ಥ ರಸಬಾವಿಯ ಮಹಿಮೆಯಿಂ | ಜನರ ಮನ ಸೆಳೆದವಳ |
ನಂಬಿದ ಭಕುತರ ಎಂದೆಂದು ಕಾಯುವ | ಪದ್ಮಾವತಮ್ಮನ ನಮಿಪೆ ॥೫೩೪॥

ಶ್ರೀಮಠ ಜಿನಮಂದಿರದೊಳು ಜುಳಿತಿಹ । ಶ್ರೀ ನೇಮಿನಾಥನಿಗೆ ನಮಿಸಿ ।
ಓಂಕಾರ ರೂಪಿಣಿ ಶ್ರೀ ಸರಸ್ವತಿಯನು । ಸಾನುರಾಗದಿ ಪೂಜೆಗೈಯ್ವೆ ॥ ೫೩೫ ॥

ನಂಬಿದ ಭಕುತರ ಎಂದೆಂದು ಪೊರೆಯುವ । ಅಂಬಾ ಅಂಬಾಲಿಕಾದೇವಿ ।
ಶ್ರೀ ಕೂಷ್ಮಾಂಡಿನಿದೇವಿಯ ನಮಿಸುತ । ಕ್ಷೇತ್ರಪಾಲರಿಗೆ ನಮಿಸುವೆನು ॥ ೫೩೬ ॥

ಒಂದುಸಾವಿರದಮುನ್ನೂರು ವರುಷದ । ಹಿಂದಿನ ಶ್ರೀ ಬಾಹುಬಲಿಯ ।
ಚಂದದಿ ದರುಶನಗೈಯ್ಯಲು ಬಾಹು । ಬಲಿ ಗುಡ್ಡವನ್ನೇರುವನು ॥ ೫೩೭ ॥

ಕಾಯೋತ್ಸರ್ಗದಿ ಜಟಾಧಾರಿಯಾಗಿ । ತಪೋ ಮುದ್ರೆಯೊಳು ನಿಂತಿರುವ ।
ಶ್ರೀ ಬಾಹುಬಲಿ ಯೋಗೀಂದ್ರನ ನಮಿಸುತ । ಪಾರ್ಶ್ವನಾಥನಿಗೆ ನಮಿಸುವೆನು ॥ ೫೩೮ ॥

ತಪೋಭಾವದೊಳು ನಿಂತಿರುವ ಶ್ರೀ ಪಾರ್ಶ್ವ । ಜಿನೇಂದ್ರನ ನಾ ನಮಿಸುತಲಿ ।
ಇಪ್ಪತ್ನಾಲ್ಕು ಹಸ್ತದಿಂ ಕೂಡಿಹ । ಭೈರವ ಪದ್ಮಾವತಿಗೆ ನಮಿಸುವೆ ॥ ೫೩೯ ॥

ಧರಣೇಂದ್ರಯಕ್ಷನ ಸ್ತುತಿಸುತ ನಾ ನಿತ್ಯ । ಉತ್ತಮ ಶ್ರಾವಕನಾಗಿ ।
ಬಾಳುವ ಭಾಗ್ಯವ ನೀ ಕರುಣಿಸೆಂದು । ಮತ್ತೆ ಮತ್ತೆ ಬೇಡುವೆನು ॥ ೫೪೦ ॥

ದೇಶವಿದೇಶದೊಳ್ ಖ್ಯಾತಿಯ ಗಳಿಸಿಹ । ಶ್ರೀ ಜಗದ್ಗುರು ದೇವೇಂದ್ರ ।
ಕೀರ್ತಿಗಳಾಶೀರ್ವಾದವ ಪಡೆದಿಹೆ । ಧಾರ್ಮಿಕ ಶ್ರೀ ಸ್ಫೂರ್ತಿ ಬರಲು ॥ ೫೪೧ ॥

ಗುರುಪೀಠ ಪಾದಕೆ ಭಕ್ತಿಯಿಂ ನಮಿಸುತ । ಗುರುಗಳ ಆಶೀರ್ವಾದದಿಂದ ।
ಬರೆದೆನು ಆದರ್ಶ ಶ್ರಾವಕ ಪದುಮಯ್ಯ । ಚರಿತೆಯನು ಭಕ್ತಿಯಿಂದ ॥ ೫೪೨ ॥

## ಹೊಂಬುಜದಲ್ಲಿ ಪದುಮಯ್ಯಗೌಡರ ಸ್ಮಾರಕ ಭವನ

ಪದುಮಯ್ಯರ ಧಾರ್ಮಿಕ ಕಾರ್ಯವ । ನೆನೆಯಲು ಪೊಂಬುಜ ಗುರುಗಳು ।
ಪದುಮಯ್ಯಗೌಡರ ಸ್ಮಾರಕ ಭವನವ । ಕಟ್ಟಿಸಿದರು ಪ್ರೀತಿಯಿಂದ ॥ ೫೪೩ ॥

ಪಿ. ಜಿ. ಎಸ್. ಭವನವೆಂದು ನಾಮಕರಣ । ಪ್ರೀತಿಯಿಂ ತಾವು ಮಾಡಿ ।
ಬಂದ ಭಕುತರ್ಗೆ ಚಂದದಿಂ ತಂಗುವ । ತಂಗುದಾಣವ ಮಾಡಿದರು ॥ ೫೪೪ ॥



## ವಿವಿಧ ಸಾಹಿತಿಗಳಿಂದ ಪುಸ್ತಕ ಅರ್ಪಣೆ

ಹೆಸರಾಂತಸಾಹಿತಿ ಜಿ. ಬ್ರಹ್ಮಪ್ಪನವರುಗಳ್ । 'ಸಮಯಸಾರ' ಕೃತಿಯನ್ನು ।
ಪದುಮಯ್ಯನವರಿಗರ್ಪಿಸಿದರು ಕಲಿ । ಕಾಲದ ಸಮವಸರಣದಂದು ॥ ೫೪೫ ॥

ಅಜೈನರಾದರೂ ಮುಳ್ಳೂರು ವೆಂಕಟ । ಸುಬ್ಬಯ್ಯನವರು ರಚಿಸಿದ ।
'ಜಿನಭಜನೆಮಂಜರಿ' ಪುಸ್ತಕವನು । ಪದುಮಯ್ಯನವರಿಗರ್ಪಿಸಿದರು ॥ ೫೪೬ ॥

ಮದನಕೇಸರಿಯವರು ತಮ್ಮಯ ಕೃತಿಗಳ । ಮಾವನವರಿಗರ್ಪಿಸುತಾ ।
ಪದುಮಯ್ಯನವರ ಧಾರ್ಮಿಕ ಕಾರ್ಯವ । ನಿತ್ಯವು ನಡೆಸುತಲಿಹರು ॥ ೫೪೭ ॥

## ಉಪಕಾರ ಸ್ಮರಣೆ

ಉಪಕಾರ ಸ್ಮರಣೆಯಗೈಯ್ಯಲು । ಚರಿತೆಯ ಬರೆದೆನು ನಾ ಭಕ್ತಿಯಿಂದ ।
ಪದುಮಯ್ಯನವರಿಂದ ತತ್ವವ ತಿಳಿದೆನು । ಜಿನಭಜನೆಯ ನಾ ಕಲಿತೆನು ॥ ೫೪೮ ॥

ಚಿಕ್ಕವನಿದ್ದಾಗ ಚಕ್ಕೂರಿನಿಂದ । ಪ್ರೀತಿಯಿಂ ತಾವ್ ಕರೆತಂದು ।
ಜಿನಭಕ್ತಿ ಗೀತೆಯ ಪಾಡಲು ಕಲಿಸಿದರ್ । ಧರ್ಮಾತ್ಮ ಪದುಮಯ್ಯಗೌಡರು ॥ ೫೪೯ ॥

ಸಂಗೀತ ಕಲಿಯಲು ಸಾಹಿತ್ಯ ಕಲಿಯಲು । ಜಿನತತ್ವವನು ಕಲಿಯಲು ।
ಸಂತೋಷದಿಂದ ಸಹಾಯವಗೈದರು । ಧರ್ಮಾತ್ಮ ಪದುಮಯ್ಯನವರು ॥ ೫೫೦ ॥

## ಉಪಸಂಹಾರ

ಆದರ್ಶ ಶ್ರಾವಕ ಪದುಮಯ್ಯ । ಚರಿತೆಯ ಆದರದಿಂದಲಿ ಓದಿ ।
ಆದರಿಸುತ ಧರ್ಮಾತ್ಮರುಗಳ ನಿತ್ಯ । ಧರ್ಮಾತ್ಮರಾಗಿ ನೀವ್ ಬಾಳಿ ॥ ೫೫೧ ॥

ಧರ್ಮವೇ ಮೈವೆತ್ತು ನಿಂತ ಶ್ರೀ ಪದುಮಯ್ಯ । ಗೌಡರಾತ್ಮನಿಗೆ ಮಂಗಲವು ।
ಆದರ್ಶ ಶ್ರಾವಕರಾದ ಶ್ರೀ ಸಮ್ಯಜ್ಞಾನಿಗೆ । ನಿತ್ಯ ಮಂಗಲವು ॥ ೫೫೨ ॥

**– ಆದರ್ಶ ಶ್ರಾವಕ ಪದುಮಯ್ಯಚರಿತೆ ಸಂಪೂರ್ಣಂ –**



## ತಪ್ಪು–ಒಪ್ಪೋಲೆ

| ಪುಟ | ಸಾಲು | ಇರುವುದು | ಇರಬೇಕಾದದ್ದು |
|---|---|---|---|
| 12 | 20 | ನೂರಮೂವತ್ಮೂರರೊಳ್ | ನೂರರವತ್ಮೂರರೊಳ್ |
| 18 | 18 | ಮತ್ತಧ್ವಿಪೇಂದ್ರ | ಮತ್ತದ್ವಿಪೇಂದ್ರ |
| 23 | 16 | ನಿತ್ಯಾಕ್ರಿಯಾದರ್ಪಣ | ನಿತ್ಯಕ್ರಿಯಾದರ್ಪಣ |
| 24 | 5 | ಮುಡಿಸಿ | ಮಾಡಿಸಿ |
| 25 | 19 | ಪರಮೋಕಾರವ | ಪರಮೋಪಕಾರವ |
| 36 | 9 | ಧಮರಹಸ್ಯ | ಧರ್ಮರಹಸ್ಯ |
| 40 | 14 | ಶಾಸ್ತ್ರಗಳ | ಶಾಸ್ತ್ರಗಳು |
| 43 | 21 | ಶ್ರೀಕಾಂತಶಾಸ್ತ್ರಿ | ಶಾಂತಿರಾಜಶಾಸ್ತ್ರಿ |
| 45 | 9 | ಸುರೇಂದ್ರಕುಮಾರ | ವೀರೇಂದ್ರಕುಮಾರ |
| 46 | 4 | ಧಾರ್ಮಿಕೈರ್ವಿನ್ | ಧಾರ್ಮಿಕೈರ್ವಿನಾ |
| 51 | 6 | ಗುಡ್ಡವನ್ನೆರವನು | ಗುಡ್ಡವನ್ನೆರುವೆನು |



## ಲೇಖಕರ ಕುರಿತು....

ಶ್ರೀ ಡಿ. ಸುಬ್ಬಣ್ಣ ಜೈನ್

ತಂದೆ : ಶ್ರೀ ದೇವೇಗೌಡರು

ತಾಯಿ : ಶ್ರೀಮತಿ ದೇವಮ್ಮನವರು

ಸ್ಥಳ : ಚಿಕ್ಕೂರು
ಹೆಗ್ಗಡದೇವನಕೋಟೆ ತಾಲ್ಲೂಕು
ಮೈಸೂರು ಜಿಲ್ಲೆ

ಶ್ರೀಯುತರು ವೃತ್ತಿಯಲ್ಲಿ ರೈತರಾದರೆ ಪ್ರವೃತ್ತಿಯಲ್ಲಿ ಸಂಗೀತಗಾರರು. ಕೇರಳದ ವೈನಾಡಿನ ಧರ್ಮಾತ್ಮ ಪದ್ಮೇಗೌಡರು ಇವರಿಗೆ ಮೈಸೂರಿನ ಟಿ. ಪುಟ್ಟಸ್ವಾಮಯ್ಯನವರಲ್ಲಿ ಸಂಗೀತ ಶಿಕ್ಷಣಕ್ಕೆ ವ್ಯವಸ್ಥೆ ಮಾಡಿದರು. ಏಳು ವರ್ಷಗಳ ಕಾಲ ಅವರಲ್ಲಿ ಅಭ್ಯಾಸವನ್ನು ಮಾಡಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಜೈನಧಾರ್ಮಿಕ ಭಜನೆಗಳನ್ನು ಇಂಪಾಗಿ-ಭಾವುಕರಾಗಿ ಹಾಡುವ ಇವರು ಇಡೀ ಕರ್ನಾಟಕದಲ್ಲಿ ತಮ್ಮ ಗಾನಲಹರಿಯನ್ನು ಹರಿಸಿದ್ದಾರೆ. ಶ್ರೀ ಕ್ಷೇತ್ರ ಹೊಂಬುಜದ ರಥೋತ್ಸವ ವೇಳೆಯಲ್ಲಿ ಕಳೆದ ಹತ್ತು ವರ್ಷಗಳಿಂದ ಸಂಗೀತ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಆಚಾರ್ಯ ಶ್ರೀ ವಿದ್ಯಾನಂದ ಮುನಿಗಳ ಚಾತುರ್ಮಾಸಗಳಲ್ಲಿ ನಿರಂತರವಾಗಿ ತಮ್ಮ ಜಿನಭಜನೆ ಸೇವೆ ಸಲ್ಲಿಸಿದ್ದಾರೆ. "ಧರ್ಮತೀರ್ಥಮಹಿಮೆ", "ಶ್ರೀ ವೀತರಾಗ ಗೀತವಿತಾನ" ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಅಲ್ಲದೆ ಅನೇಕ ಭಜನಾ ಗೀತೆಗಳನ್ನು ರಚಿಸಿ, ಹಾಡಿದ್ದಾರೆ. ಇವರ ಧ್ವನಿಸುರುಳಿಗಳು ಜೈನಸಂಪ್ರದಾಯಸ್ಥ ಕುಟುಂಬಗಳಲ್ಲಿ ಮನೆ ಮಾತಾಗಿರುವುದು ಸುಳ್ಳಲ್ಲ.

ಬಡ ರೈತ ಕುಟುಂಬದಲ್ಲಿ ಹುಟ್ಟಿದ ತಮಗೆ ಧಾರ್ಮಿಕ ಜ್ಞಾನನೀಡಿ, ಸಂಗೀತ ಸಾಧನೆಗೆ ಅನುವು ಮಾಡಿಕೊಟ್ಟ ವೈನಾಡಿನ ಧರ್ಮಾತ್ಮ ಸ್ವರ್ಗೀಯ ಎಂ. ಎಸ್. ಪದ್ಮಯ್ಯನವರ ಜೀವನಚರಿತೆಯನ್ನು ಸಾಂಗತ್ಯ ಪದ್ಯಗಳಲ್ಲಿ ರಚಿಸಿ ಪ್ರಕಟಿಸಿದ್ದಾರೆ. ಈ ಮೂಲಕ ಅವರು ತಮ್ಮ ವ್ಯಕ್ತಿತ್ವ ರೂಪುಗೊಳ್ಳಲು ಕಾರಣರಾದವರಿಗೆ ಸಲ್ಲಿಸುತ್ತಿರುವ ಅಪೂರ್ವ, ಅಸದೃಶ, ಕೃತಜ್ಞತಾಪೂರ್ವಕ ಕಾಣಿಕೆಯೂ ಆಗಿದೆಯೆಂದರೆ ಅತಿಶಯೋಕ್ತಿಯಾಗಲಾರದು.

ಶ್ರೀಯುತರಿಗೆ ಶ್ರೀ ಜಿನಶಾಸನ ದೇವತೆಗಳು ಇತ್ತೋಪ್ಯತಿಶಯವಾದ ಜ್ಞಾನ, ಕಾವ್ಯರಚನಾಶಕ್ತಿ, ಆಯುರಾರೋಗ್ಯಾದಿಗಳನ್ನು ಕರುಣಿಸಿ ಸಮಾಜಕ್ಕೆ ಅವರಿಂದ ಅಧಿಕ ಸೇವೆ ಸಲ್ಲುವಂತಾಗಲೆಂದು ಪ್ರಾರ್ಥಿಸೋಣ.

— ಜ್ಯೋತಿಷ್ಯವಿದ್ವಾನ್, ಪ್ರತಿಷ್ಠಾಚಾರ್ಯ
ಭುವನಹಳ್ಳಿ ಡಿ. ಶ್ರೀಪತಿಜೋಯಿಸ್